# ಮುರಾರಿರಾವ

ಅಥವಾ

## ಗುಪ್ತಪೋಲೀಸರ ಚಾತುರ್ಯ



ಲೇಖಕ,


**ತನ್ಹಾಜಿ ನಾರಾಯಣ ಆನಿಗೊನಭಾವಿ,**

ಪೆನಶನರ ಅಸಿ. ಮಾಸ್ತರ ಟ್ರೇ. ಕಾ. ಫಾರ ವಿಮೆನ್, ಧಾರವಾಡ





1934

**ಬೆಲೆ ೬ ಆಣೆ.**

ಮುದ್ರಕ--ವೇಂಕಟೇಶ ತಿರಕೋ ಕುಲಕರಣಿ, ಗಳಗನಾಥ.

ಮುದ್ರಣಾಲಯ---ಶ್ರೀ ವೇಂಕಟೇಶ ಪ್ರಿಂಟಿಂಗ್ ಪ್ರೆಸ್ ಹಾವೇರಿ.

ಪ್ರಕಾಶಕ—ವೇಂಕಟೇಶ ತಿರಕೋ ಕುಲಕರಣಿ, ಗಳಗನಾಥ .

ಪ್ರಸಿದ್ಧಿಸುವಸ್ಥಳ—"ಸದ್ಗುರು"ಆಫೀಸು, ಹಾವೇರಿ ಜಿ. ಧಾರವಾಡ.

# ೧ನೆಯ ಆವೃತ್ತಿಯ ಪ್ರಸ್ತಾವನೆ.



ಈಗ ಸುಮಾರು ಎಂಟು ಹತ್ತು ವರ್ಷಗಳ ಹಿಂದೆ ಧಾರವಾಡ ಟ್ರೇನಿಂಗ ಕಾಲೇಜಿನ ಆಗಿನ ಪ್ರಿನ್ಸಿಪಾಲರಾದ ಸಾಮುದಾರ ರಾವಬಹಾದ್ದೂರ ಶ್ರೀನಿವಾಸ ರಾವ ರೊಡ್ಡ ಇವರೊಂದಿಗೆ ಮೈಸೂರಪ್ರವಾಸಕ್ಕೆ ಹೊರಟಾಗ, ನಾನು 'ಮೃಣಾಲಿನಿ' ಕಾದಂಬರಿಯನ್ನು ಭಾಷಾಂತರಿಸಬೇಕೆಂದೂ, ಮಿ. ರಾ. ರಾ. ಅಮೀನಭಾವಿಯವರು 'ಮುರಾರಿರಾವ' ಕಾದಂಬರಿಯನ್ನು ಭಾಷಾಂತರಿಸಬೇಕೆಂದೂ ಗೊತ್ತುಮಾಡಿ ಕೊಂಡಿದ್ದೆವು. ಅದರಂತೆ ನನ್ನ 'ಮೃಣಾಲಿನಿ' ಯು ಈ ಮೊದಲೆ ಸದ್ಬೋಧ ಚಂದ್ರಿಕೆಯ ಆಶ್ರಯದಲ್ಲಿ ಪ್ರಸಿದ್ಧವಾಯಿತು. ಮಿ. ಅಮೀನಭಾವಿಯವರ ಮುರಾರಿರಾವ ಕಾದಂಬರಿಯು ಕೆಲವು ಅನನುಕೂಲತೆಗಳ ಮೂಲಕ ಇಷ್ಟು ದಿವಸ ತಡೆದಿದ್ದರೂ, ಅದು ಈಗ ಪ್ರಸಿದ್ಧವಾದ್ದನ್ನು ನೋಡಿ ನನಗೆ ಬಹಳ ಸಮಾಧಾನವಾಗುತ್ತದೆ.

ಮುರಾರಿರಾವ ಕಾದಂಬರಿಯು, ಇದೊಂದು ಗುಪ್ತಪೋಲೀಸರ ಚಾತುರ್ಯದ ಪ್ರಸಂಗವಾಗಿರುವದು. ಕನ್ನಡದಲ್ಲಿ ಈ ತರದ ಮನೋರಂಜಕ ಹಾಗು ಜಿಜ್ಞಾಸಾಪೂರಕ ಗ್ರಂಥಗಳು ಇಲ್ಲವೇ ಇಲ್ಲ. ಮಿ. ಅಮೀನಭಾವಿಯವರು ಇದನ್ನು ಕನ್ನಡಕ್ಕೆ ಪರಿವರ್ತಿಸಿ, ಕನ್ನಡಿಗರಿಗೆ ಮನೋರಂಜನದಒಂದು ಹೊಸ ದಿಸೆಯನ್ನು ತೋರ್ಪಡಿಸಿದಂತಾಗಿರುವದು.

ಈ ಕಾದಂಬರಿಯ ಪ್ರೂಫುಗಳನ್ನು ತಿದ್ದಲು ನನಗೂ, ಮಿ. ಅಮೀನಭಾವಿಯವರಿಗೂ ಆಗಲಿಲ್ಲ; ಅವನ್ನು ಶ್ರೀಶೇಷಾಚಲ ಪ್ರಿಂಟಿಂಗಪ್ರೆಸ್ಸಿನವರೇ ನೋಡಿರುವರು. ಅಲ್ಪಸ್ವಲ್ಪ ಪ್ರಿಂಟಿಂಗಿನ ದೋಷಗಳುಳಿದಿರಬಹುದು;

ಭಾಷಾಸೇವಾಭಿಮಾನಿಗಳೂ, ಉದಾರರೂ ಆದ ಕನ್ನಡಿಗರು ಈ ಗ್ರಂಥಕ್ಕೆ ಉತ್ತೇಜನಕೊಟ್ಟರೆ, ಶ್ರೀಶೇಷಾಚಲ ಗ್ರಂಥಮಾಲೆಯ ದ್ವಾರದಿಂದ ಈಬಗೆಯ ಹಲವು ಪುಸ್ತಕಗಳು ಹೊರಬೀಳಬಹುದು.

ಆನಂದವನ, ಅಗಡಿ.
ತಾ. ೪–೨–೧೬.

ವಿಧೇಯ,
ವೇ. ತಿ. ಗಳಗನಾಥ

---

# ೨ನೆಯ ಆವೃತ್ತಿಯ ಪ್ರಸ್ತಾವನೆ.

ಕನ್ನಡಿಗರು ಉದಾರಾಶ್ರಯವನ್ನು ಕೊಟ್ಟದ್ದರಿಂದ ಈ ಪುಸ್ತಕದ ೨ನೆಯ ಆವೃತ್ತಿಯನ್ನು ತೆಗೆಯುವ ಪ್ರಸಂಗಬಂತು. ಇದಕ್ಕಾಗಿ ಗ್ರಂಥಕರ್ತನು ತುಂಬಾ ಕೃತಜ್ಞನಾಗಿರುವನು. ಈ ಆವೃತ್ತಿಯಲ್ಲಿ ಮೊದಲಿನ ಮುದ್ರಣದೋಷಗಳನ್ನು ತಿದ್ದಿ, ಪ್ರತಿಯೊಂದು ಪ್ರಕರಣಕ್ಕೆ ಶಿರೋಲೇಖಗಳನ್ನು ಜೋಡಿಸಿದೆ.

ಈ ಆವೃತ್ತಿಯನ್ನು ತೆಗೆಯಲು ಹುರಿದುಂಬಿಸಿ, ಪ್ರೂಪುಗಳನ್ನು ನೋಡಿ, ಪುಸ್ತಕಗಳನ್ನು ಮಾರುವ ಭಾರವನ್ನು ವಹಿಸಿ ಇನ್ನೂ ಅನೇಕ ಬಗೆಯಿಂದ ಸಹಾಯಮಾಡಿದಧಾರವಾಡದ ಕರ್ಣಾಟಕ–ವಾಙ್ಮಯ–ಸೇವಾ–ಸಂಘದ ಕಾರ್ಯದರ್ಶಿಗಳಾದ ಶ್ರೀ. ಬಾಳಾಜಿ ಕೃಷ್ಣ ಹಳಪೇಟ ಇವರ ಉಪಕಾರ ಸ್ಮರಿಸುವೆನು.

ಈ ಪುಸ್ತಕವನ್ನು ಮುದ್ರಿಸಲು, ಒಂದು ಬಗೆಯಿಂದ ಹಣದ ಅನುಕೂಲವನ್ನು ಮಾಡಿಕೊಟ್ಟು, ಬಹುಬೇಗ ಪುಸ್ತಕಗಳನ್ನು ಕೊಟ್ಟದ್ದಕ್ಕಾಗಿ ಮುದ್ರಣಾಲಯದ ಮಾಲಕರಾದ ಶ್ರೀಯುತ ಜತಾರ ಬಳವಂತರಾಯರ ಆಭಾರ ಮನ್ನಿಸುವೆನು.

ಉದಾರ ಕನ್ನಡಿಗರು ಹಿಂದಿನ ಆವೃತ್ತಿಯ ಪುಸ್ತಕಗಳಿಗೆ ಆಶ್ರಯ ಕೊಟ್ಟಂತೆ ಈ ಸಾರೆಯೂ ಕೊಟ್ಟು, ನನ್ನ ಕಡೆಯಿಂದ ಈ ಪ್ರಕಾರದ ವಾಙ್ಮಯ ಸೇವೆಯನ್ನು ಮಾಡಿಸಲು ಪ್ರೋತ್ಸಾಹನ ಕೊಡುವರೆಂದು ನಂಬಿರುವೆನು.

ಜ್ಯೈ. ಶು. ಪ್ರತಿಪದೆ
ಶಕೆ. ೧೮೪೩.

ಸಜ್ಜನವಿಧೇಯ,
ತ. ನಾ. ಅವಿಊನಭಾವಿ.
ಲೇಖಕ,

---

## ೩ನೆಯ ಆವೃತ್ತಿಯ ಪ್ರಸ್ತಾವನೆ.



ಈ ಸುರಸ ಕಾದಂಬರಿಯ ಒಂದನೆಯಾವೃತ್ತಿಯ ಪ್ರಸ್ತಾವನೆಯನ್ನು ಬರೆದ ನನಗೆ, ನನ್ನ ಮಾಲಕಿಯ “ ಶ್ರೀವೇಂಕಟೇಶ ” ಮುದ್ರಣಾಲಯದಲ್ಲಿ, ಇದರ ಮೂರನೆಯ ಆವೃತ್ತಿಯನ್ನು ಮುದ್ರಿಸುವಾಗ ನಾನಾಗಿ ಪ್ರಸ್ತಾವನೆ ಬರೆಯುವ ಸುಯೋಗ ಒದಗಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗುತ್ತದೆ. ಈ ಕಾದಂಬರಿಯ ಲೇಖಕರಾದ ಸಜ್ಜನ ಅವಿಊನಭಾವಿಯವರು, ನನ್ನ ಪುರಾತನದ ಹಿತಚಿಂತಕ ಮಿತ್ರರಾಗಿರುವರು. ನಾನು ನನ್ನ ಮಹಾಭಾರತಾಮೃತದ ಪ್ರಸಿದ್ಧೀಕರಣದ ಪೇಚಾಟಕ್ಕೆ ಒಳಗಾಗಿ ಪರಮಾತ್ಮನಿಗೆ ಶರಣು ಹೋಗುತ್ತಿರುವಾಗ, ಆ ಭಗವಂತನ ಕರುಣಾಕಟಾಕ್ಷದ್ದೊಂದು ಕಿರಣವು ಪ್ರಾಪ್ತವಾದಂತೆ, ನನ್ನ ಮಿತ್ರ ಅವಿಊನಭಾವಿಯವರು ಈ ಕಾದಂಬರಿ

ಯನ್ನು ಮುದ್ರಿಸುವ ಸೇವದಿಂದ ನನಗೆ ಇನ್ನೂರು ರೂಪಾಯಿಗಳನ್ನು ಕೈಗಡವಾಗಿ ಕೊಟ್ಟಿದ್ದು ಚಿರಸ್ಮರಣೀಯವಾಗಿರುವದು! ಬಹು ದಿವಸಗಳಿಂದ ದೊಡ್ಡ ಸಾಲಗಾರನೆಂದು ಪ್ರಸಿದ್ಧನಾಗಿರುವ ನನಗೆ, ನಮ್ಮ ಮಿತ್ರರಿಂದ ದೊರೆತ ಈ ಕೈಗಡವು, ಅವರ ಸೌಜನ್ಯದ ದೃಷ್ಟಿಯಿಂದ ಅಷ್ಟು ಮಹತ್ವದ್ದಾಗಿರದಿದ್ದರೂ, ನನ್ನ ಪತ್ರಿಸಂರಕ್ಷಣದದೃಷ್ಟಿಯಿಂದ ಅದು ಅತ್ಯಂತಮಹತ್ವದ್ದಾಗಿರುವದು! ಈ ಉಪಕೃತಿಗಾಗಿ ನಾನು ನನ್ನ ಆ ಸನ್ಮಿತ್ರರಿಗೆ ಅತ್ಯಂತ ಕೃತಜ್ಞನಾಗಿರುವೆನು!

| | |
|---|---|
| ಸದ್ಗುರು ಆಫೀಸ<br>ಹಾವೇರಿ. ಜಿ. ಧಾರವಾಡ.<br>ತಾ. ೨೮-೧ ೩೪. | ಕನ್ನಡಿಗರ ಸೇವಕ<br>ವೇಂಕಟೇಶ, ತಿರಕೊ ಕುಲಕರಣಿ<br>ಗಳಗನಾಥ. |



# ಮುರಾರಿರಾವ.

ಅಥವಾ

# ಗುಪ್ತಪೋಲೀಸರ ಚಾತುರ್ಯ.

## ೧ನೆಯ ಪ್ರಕರಣ.

### ಈ ಗೃಹಸ್ಥನು ಯಾರು?

ಮುಂಬಯಿ ಪಟ್ಟಣದಲ್ಲಿ ಇಂಗ್ರೇಜಿ ತರದ ವೈದ್ಯಶಾಸ್ತ್ರವನ್ನು ಕಲಿಸುವದೊಂದು ಕಾಲೇಜ ಇರುತ್ತದೆ. ಅದಕ್ಕೆ "ಗ್ರ್ಯಾಂಟ ಮೆಡಿಕಲ್ ಕಾಲೇಜ" ವೆಂಬ ಹೆಸರು. ಕೆಲವು ದಿವಸಗಳ ಹಿಂದೆ ಈ ಕಾಲೇಜದಲ್ಲಿ ಗಣಪತರಾಯನೆಂಬೊಬ್ಬ ತರುಣನು ಅಭ್ಯಾಸಮಾಡುತ್ತಿದ್ದನು. ಅವನ ಅಭ್ಯಾಸವು ಈಗ ನಾಲ್ಕು ವರ್ಷದವರೆಗೆ ತಕ್ಕಮಟ್ಟಿಗೆ ಆಗಿತ್ತು. ಮುಂದಿನ ವರ್ಷ ಅವನು ಕಡೆಯ ಪರೀಕ್ಷೆಗೆ ಕೂಡ್ರತಕ್ಕವನಿದ್ದನು. ಕಾಲೇಜದ ಆವಾರದಲ್ಲಿಯೇ ಕೆಲವು ವಿದ್ಯಾರ್ಥಿಗಳು ಕೂಡಿ ಒಬ್ಬ ಅಡಿಗೆಯವನನ್ನು ಇಟ್ಟು ಊಟದ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಿದ್ದರು. ಇಂಥ ಸಂಸ್ಥೆಗಳಿಗೆ "ಕ್ಲಬ್" ಅನ್ನುತ್ತಾರೆ. ಗಣಪತರಾಯನು ಇಂಥದೊಂದು ಕ್ಲಬ್ಬಿನಲ್ಲಿ ಉಣ್ಣುತ್ತಿದ್ದನು. ಆದರೆ ಮಲಗಲಿಕ್ಕೆ ಮಾತ್ರ ಕಾಲೇಜಕ್ಕೆ ಹೊಂದಿರುವ "ಭಾಯಖಳಾ" ಎಂಬ ಓಣಿಯೊಳಗಿನ ಒಂದು ವಠಾರ (ಚಾಳ) ದ ಅಟ್ಟದ ಮೇಲಿನ ಕೋಣೆಯನ್ನು ಬಾಡಿಗೆಯಿಂದ ಹಿಡಿದಿದ್ದನು. ಅಲ್ಲಿ ಅವನು ಹಗಲು ಎಂದೂ ಇರುತ್ತಿದ್ದಿಲ್ಲ. ಪ್ರತಿ ದಿವಸ ಅವನು ಚುಮು ಚುಮು ನಸುಕಿನಲ್ಲೆದ್ದು, ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಅಲ್ಲಿಂದ ಹೊರಬಿದ್ದನೆಂದರೆ, ರಾತ್ರಿ ೮ ಬಡಿಯುವತನಕ ತಿರುಗಿ ಅಲ್ಲಿಗೆಬರುತ್ತಿದ್ದಿಲ್ಲ. ಮುಂಜಾನೆ ಹತ್ತು

ಬಡಿಯುವವರೆಗೆ " ಜೆ. ಹಾಸ್ಪಿಟಲ್ " ಎಂಬ ದವಾಖಾನೆಗೆ ಹೋಗಿ, ರೋಗಿಗಳಿಗೆ ಔಷಧೋಪಚಾರವನ್ನು ಮಾಡಬೇಕಾಗುತ್ತಿತ್ತು. ಅಲ್ಲಿಂದ ಕ್ಲಬ್ಬಿಗೆ ಹೋಗಿ ಉಂಡು, ೧೧ ಗಂಟೆಯಿಂದ ಮಧ್ಯಾಹ್ನ ೪ ಗಂಟೆಯವರೆಗೆ ವ್ಯಾಖ್ಯಾನಗಳನ್ನು ಕೇಳುವದಕ್ಕಾಗಿ ಕ್ಲಾಸಿಗೆ ಹೋಗಬೇಕಾಗುತ್ತಿತ್ತು. ಶಾಲೆಬಿಟ್ಟ ಕೂಡಲೆ ಸ್ವಲ್ಪ ಉಪಾಹಾರಮಾಡಿಕೊಂಡು, ಅವನು ತನ್ನ ಗೆಳೆಯರನ್ನು ಕೂಡಿಕೊಂಡು " ಹಿಂದೂ ಜಿಮಖಾನಾ " ಎಂಬ ಗರಡೀಸಾಧಕದ ಮನೆಗೆಹೋಗಿ ಚೆಂಡು ಆಡಿ ವ್ಯಾಯಾಮ ಮಾಡುತ್ತಿದ್ದನು. ಅಲ್ಲಿಂದ ಸ್ವಲ್ಪ ಹೊತ್ತು " ಬ್ಯಾಕಬೇ " ಎಂಬ ಸಮುದ್ರತೀರದ ಆರೋಗ್ಯಕರವಾದ ಪ್ರದೇಶದಲ್ಲಿ ತಿರುಗಾಡಿ, ಪುನಃ ಸಾಯಂಕಾಲದ ಊಟದ ಹೊತ್ತಿಗೆ ಕ್ಲಬ್ಬಿಗೆ ಬಂದು ಒದಗುತ್ತಿದ್ದನು. ಅವನು ಊಟ ತೀರಿಸಿಕೊಂಡು ತನ್ನ ಕೋಣೆಗೆ ಬರಬೇಕಾದರೆ ೮ ಹೊಡೆಯುತ್ತಿತ್ತು. ತರುವಾಯ ಅವನು ಅಲ್ಲಿ ಒಂದು ತಾಸು ಏನಾದರೂ ಓದಿ ನಾಳಿಗೆ ಹಾಕುವ ಉದ್ಯೋಗವನ್ನೇ ಮಾಡುತ್ತಿದ್ದನು. ಇದು ಅವನ ದಿನಚರ್ಯೆಯಾದದ್ದರಿಂದ, ಹಗಲು ಅವನು ತನ್ನ ಕೋಣೆಗೆ ಹೋಗುತ್ತಿದ್ದಿಲ್ಲ. ಆದದರಿಂದ ಆ ವಠಾರದೊಳಗಿನ ಯಾವಜನರ ಗುರುತೂ ಅವನಿಗಿದ್ದಿಲ್ಲ. ಇಷ್ಟೇ ಅಲ್ಲ. ಅಲ್ಲಿಯ ಜನರನ್ನು ಅವನು ಕಣ್ಣೆತ್ತಿಸಹ ನೋಡಿದ್ದಿಲ್ಲ; ಆದರೆ ಇದೇ ಸ್ಥಿತಿಯು ಕಡೆತನಕ ಉಳಿಯಲಿಲ್ಲ. ಇತ್ತಿತ್ತಲಾಗಿ ಅವನ ದಿನಚರ್ಯೆಯು ಬದಲಾಯಿತು. ಯಾಕೆಂದರೆ ಈ ವರ್ಷ ಅವನಿಗೆ ಪರೀಕ್ಷೆಯು ಇದ್ದಿಲ್ಲವಾದಕಾರಣ, ಹಗಲು ಅಭ್ಯಾಸದ ಸಲುವಾಗಿ ಕಾಲೇಜಕ್ಕೆ ಹೋಗುವ ಕಾರಣವಿದ್ದಿಲ್ಲ. ಅದರಿಂದ ಅವನು ನಾಲ್ಕಾರು ದಿವಸಗಳ ಮೊದಲ್ಗೊಂಡು ಹಗಲೆಲ್ಲ ತನ್ನ ಕೋಣೆಯಲ್ಲಿಯೇ ಇರುತ್ತಿದ್ದನು. ಮನುಷ್ಯನಿಗೆ ಸಮಾಗಮಸುಖವು ಬೇಕು ಈ ನಿಯಮದ ಪ್ರಕಾರ ಗಣಪತರಾಯನು ತನ್ನ ನೆರೆಹೊರೆಯ ಜನರಕೂಡ ಬಳಿಕೆ ಮಾಡಹತ್ತಿದನು. ಚುಟ್ಟದ ವ್ಯಸನವು ಈ ಕೆಲಸದಲ್ಲಿ ಅವನಿಗೆ ಬಹಳ ನೆರವಾಯಿತು. ಕಾಲೇಜದಲ್ಲಿ ಸೇರುವ ಪೂರ್ವದಲ್ಲಿ ಅವನಿಗೆ ಈ ವ್ಯಸನವಿದ್ದಿಲ್ಲ ಕಾಲೇಜದ ಗೆಳೆಯರ ಸಹವಾಸದಿಂದ ಇದು ಅವನಿಗೆ ಅಂಟಿಕೊಂಡಿತ್ತು. ಗಣಪತರಾಯನಿರುವ ಕೋಣೆಯ ನೆರೆಮನೆಯಲ್ಲಿ ಮುರಾರಿಪಂತನೆಂಬ ಮತ್ತೊಬ್ಬ ತರುಣನು ಇರುತ್ತಿದ್ದನು. ಅವನಂತೂ ಕೇವಲ ಚುಟ್ಟದ ಭಕ್ತನಾಗಿದ್ದನು. ಉಭಯತರಿಗೂ ಸಾಮಾ

ನ್ಯವಾದ ಈ ಚುಟ್ಟದ ವ್ಯಸನವು ಅವರಲ್ಲಿ ಮಿತ್ರತ್ವವನ್ನುಂಟುಮಾಡಿತು. ಮುರಾರಿಪಂತನು ಮೇಲಿಂದಮೇಲೆ ಗಣಪತರಾಯನ ಕೋಣೆಗೆ ಬರುವದು, ಇಬ್ಬರೂ ಕೂಡಿ ಚುಟ್ಟಾಹೊತ್ತಿಸುವದು, ಸೇದುವದು, ಕ್ಷಣಹೊತ್ತು ಹರಟೆ ಹೊಡೆಯುವದು, ಪುನಃ ತಮ್ಮ ತಮ್ಮ ಕೆಲಸಗಳಿಗೆ ಹೋಗುವದು ಈ ಪ್ರಕಾರ ಕ್ರಮವು ಸಾಗಹತ್ತಿತು. ಇದರಿಂದ ಅವರ ಸ್ನೇಹವು ದಿನದಿನಕ್ಕೆ ಹೆಚ್ಚಾಗಹತ್ತಿತು. ವಾಚಕರೇ, ಸ್ನೇಹಸಂಪಾದನೆಗೆ ಚುಟ್ಟದ ವ್ಯಸನವು ಸಾಧನವಾಯಿತೆಂದು, ಮನುಷ್ಯನು ಚುಟ್ಟಾ ಸೇದುತ್ತಿರಬೇಕೆಂದು ನಿಮ್ಮ ಭಾವನೆಯಾಗಬಹುದು; ಆದರೆ ತಂಬಾಕದ ವ್ಯಸನವು ಅತಿ ನೀಚವಾದದ್ದು. ಇದರಿಂದ ಶರೀರಕ್ಕೆ ಅಪಾಯವಾಗುವದಲ್ಲದೆ, ಕಾಲವೂ ಧನವೂ ವ್ಯರ್ಥವಾಗುತ್ತವೆ. ಜನರ ಸ್ನೇಹಸಂಪಾದನೆಗೆ ಸದ್ಗುಣಗಳೆಂಬ ಶ್ರೇಷ್ಠಸಾಧನಗಳನ್ನು ಆಶ್ರಯಿಸುವದನ್ನು ಬಿಟ್ಟುಕೊಟ್ಟು, ಈ ಕೀಳು ವ್ಯಸನಗಳನ್ನು ಆಶ್ರಯಿಸುವದು ಸರಿಯಾಗಬಹುದೆ?

ಹಿಂದೆ ಹೇಳಿದಂತೆ ಮುರಾರಿಪಂತನಿಗೂ, ಗಣಪತರಾಯನಿಗೂ ಸ್ನೇಹವಾದಾಗೂ, ಅದು ಇನ್ನೂ ವರೆಗೆ ಮನಸ್ಸುಬಿಚ್ಚಿ ಮಾತಾಡುವ ಸ್ಥಿತಿಯನ್ನು ಮುಟ್ಟಿದ್ದಿಲ್ಲ. ಮನಸ್ಸುಬಿಚ್ಚಿ ಮಾತಾಡುವದೇ ಮಿತ್ರತ್ವದ ಮುಖ್ಯ ಲಕ್ಷಣವಾಗಿರುತ್ತದೆ. ಮುರಾರಿಪಂತನು ಪರರ ಹೃದ್ಗತವನ್ನು ತಿಳಕೊಳ್ಳುವಲ್ಲಿಯೂ, ತನ್ನ ಇಂಗಿತವನ್ನು ಬಚ್ಚಿಡುವಲ್ಲಿಯೂ ಬಹಳ ಕುಶಲನಾಗಿದ್ದನು. ಈಗ ಎಷ್ಟೋ ದಿವಸಗಳಿಂದ ಅವರಿಬ್ಬರೂ ಕೂಡಿ ಮಾತುಕಥೆಗಳನ್ನು ಆಡುತ್ತಿದ್ದರೂ, ಗಣಪತರಾಯನಿಗೆ ಮುರಾರಿಪಂತನ ವಿಷಯವಾಗಿ, ಈ ಗೃಹಸ್ಥನು ಯಾರು, ಇವನ ಚರಿತಾರ್ಥವೇನು, ಈ ಸಂಗತಿಗಳು ಸಹ ಗೊತ್ತಾಗಿದ್ದಿಲ್ಲ. ಇವುಗಳನ್ನು ತಿಳಕೊಳ್ಳುವದಕ್ಕಾಗಿ ಗಣಪತರಾಯನು ಎಷ್ಟೋ ಸಾರೆ ಅವನಿಗೆ ನಾನಾಪ್ರಕಾರದ ಪ್ರಶ್ನೆಗಳನ್ನು ಕೇಳಿದನು; ಆದರೆ ಆ ಧೂರ್ತನು ಇವನಿಗೆ ಏನೂ ಹತ್ತಗೊಟ್ಟದ್ದಿಲ್ಲ. ಅವನು— "ಏನು ಗಣಪತರಾಯರೇ, ನನ್ನದೇನು ಕೇಳುತ್ತೀರಿ? ಊರಮೇಲೆ ಊಟ, ನೀರಮೇಲೆ ಚೆಲ್ಲಾಟ" ಎಂದು ಹೇಳುವನು; ಮತ್ತೊಮ್ಮೆ— "ಭಿಕ್ಷಾಪತಿಯು ಲಕ್ಷಾಧಿಪತಿಯು, ನನಗೆ ಯಾತರ ಕೊರತೆಯು?" ಎಂದು ಅನ್ನುವನು. ಮತ್ತು ಹಿಮ್ಮೊಮ್ಮೆ— "ಗಣಪತರಾಯರೇ, ಈ ಸೇವಾಧರ್ಮವು ಬಹಳ ಗಹನ

ವಾದದ್ದು. ಇದರಿಂದ ಮನುಷ್ಯನ ತೇಜೋಭಂಗವಾಗುತ್ತದೆ." ಎಂದು ಉದ್ಗಾರ ತೆಗೆಯುವನು. ಈ ಮಾತುಗಳಿಂದ ಗಣಪತರಾಯನ ಸಮಾಧಾನವಾಗುವದಂತು ಇರಲಿ, ಅವನ ಕುತೂಹಲವು ಮತ್ತಿಷ್ಟು ಹೆಚ್ಚಾಗುತ್ತಿತ್ತು.

ಈ ಪ್ರಕಾರ ೧೫–೨೦ ದಿವಸಗಳು ಕಳೆದುಹೋದವು. ಮುರಾರಿಪಂತನನ್ನು ಕಂಡಕೂಡಲೆ, ಇವನು ಯಾರು? ಇವನ ಉದ್ಯೋಗವೇನು? ಇವನ ಕೂಡ ಸ್ನೇಹಮಾಡಿದ್ದು ಯೋಗ್ಯವೋ ಅಯೋಗ್ಯವೋ ಎಂಬವಿಚಾರಗಳು ಗಣಪತರಾಯನ ಕಣ್ಣಮುಂದೆ ಕಟ್ಟುತ್ತಿದ್ದವು; ಮತ್ತು ಈ ವಿಷಯವಾಗಿ ಅವನು ತಾಸು ತಾಸು ಎರಡೆರಡು ತಾಸು ವಿಚಾರಮಾಡುತ್ತಿದ್ದನು. ಮುರಾರಿಪಂತನ ಬಾಯಿಯಿಂದಂತು ಈ ಸಂಗತಿಗಳು ಹೊರಡಲಿಲ್ಲವೆಂಬದು ಈಗ ಅವನಿಗೆ ಪೂರ್ಣವಾಗಿ ಮನವರಿಕೆಯಾಗಿತ್ತು. ಅದರಿಂದ ಅವನ ಮನಸ್ಸಿನಲ್ಲಿ ಈ ಸಂಗತಿಗಳನ್ನು ಪರರ ಬಾಯಿಯಿಂದ ಕೇಳಿ ತಿಳಕೊಳ್ಳಬೇಕೆಂಬ ಜಿಜ್ಞಾಸೆಯು ಹುಟ್ಟಿತು. ರಾಮಸಿಂಗನೆಂಬವನೊಬ್ಬ 'ಭಯ್ಯಾ' ಜಾತಿಯವನು ಗಣಪತರಾಯನಿರುವ ವಠಾರದ ಕಾವಲುಗಾರನಾಗಿದ್ದನು. ಅವನಲ್ಲಿ ಗಣಪತರಾಯನ ನಂಬುಗೆಯು ವಿಶೇಷವಾಗಿತ್ತು. ಗಣಪತರಾಯನು ಅವನಿಗೆ ತನ್ನ ಹಳೆ ಅರಿವೆ–ಅಂಚಡಿಗಳನ್ನು ಕೊಡುತ್ತಿದ್ದ ಕಾರಣ, ಆ ಮನುಷ್ಯನು ಇವನ ಕೂಡ ಪೂಜ್ಯಬುದ್ಧಿಯಿಂದಲೂ, ಪ್ರೇಮದಿಂದಲೂ ನಡಕೊಳ್ಳುತ್ತಿದ್ದನು. ತನ್ನದೇನಾದರೂ ಸಣ್ಣ ಪುಟ್ಟ ಕೆಲಸಗಳಿದ್ದರೆ ಗಣಪತರಾಯನು ಅವನಿಗೇ ಹೇಳುತ್ತಿದ್ದನು. ಆ ವಠಾರದಲ್ಲಿ ಬೇರೆ ಯಾರಪರಿಚಯವೂ ಗಣಪತರಾಯನಿಗೆ ವಿಶೇಷವಾಗಿದ್ದಿಲ್ಲವಾದಕಾರಣ, ಏನಾದರೂ ಕೇಳುವದಿದ್ದರೆ ಅವನನ್ನೇ ಕೇಳುತ್ತಿದ್ದನು. ಈ ಪ್ರಸಂಗದಲ್ಲಿ ಮುರಾರಿಪಂತನ ವಿಷಯವಾಗಿ ರಾಮಸಿಂಗನಿಗೇನಾದರೂ ಗೊತ್ತು ಅದೆಯೋ ಹೇಗೆ? ಎಂಬವನ್ನು ಅರಿತುಕೊಳ್ಳುವದಕ್ಕಾಗಿ, ಗಣಪತರಾಯನು ಅವನ ಬಳಿಗೆ ಹೋದನು. ರಾಮಸಿಂಗನು ಆ ವಠಾರದ ಅಟ್ಟದ ಕೆಳಗೆ ತಲೆಬಾಗಿಲ ಬಳಿಯಲ್ಲಿ ಒಂದು ಕೋಣೆಯೊಳಗೆ ಇರುತ್ತಿದ್ದನು. ಅವನಿಗೆ ಹೆಂಡಿರು-ಮಕ್ಕಳು ಮೊದಲಾದವರಾರೂ ಇದ್ದಿಲ್ಲ. ಅವನ ವಯಸ್ಸು ಸುಮಾರು ೪೫–೫೦ ವರ್ಷಗಳಾಗಿರಬಹುದು, ಆದರೂ ಅವನ ಮೈಕಟ್ಟು ಒಳ್ಳೇ ಸದೃಢವಾಗಿತ್ತು. ಅವನ ಮುಖಮುದ್ರೆಯೂ, ಮಾತೂ ಬಹು ಗಾಂಭೀರ್ಯವನ್ನು ವ್ಯಕ್ತಮಾಡುತ್ತಿದ್ದವು. ಅವನು ಸ್ವಚ್ಛವಾದ

ಒಂದು ಧೋತರವನ್ನುಟ್ಟು ವೀರಗಚ್ಚೆಯನ್ನು ಹಾಕಿದ್ದನು. ಮೈಯೊಳಗೆ ಒಂದು ಚಣ್ಣದ ಅರಿವೆಯ ಒಳಅಂಗಿಯನ್ನು ತೊಟ್ಟುಕೊಂಡಿದ್ದನು. ತಲೆಗೆ ಗುಲಾಬಿಬಣ್ಣದ ಮುಂಡಾಸವನ್ನು ಸುತ್ತಿದ್ದನು. ಗಣಪತರಾಯನು ಅವನ ಕೋಣೆಗೆ ಹೋದಾಗ ಅವನು ಒಂದು ಬಾಕಿನಮೇಲೆ ಕುಳಿತು ಗುಡುಗುಡೀ ಸೇದುತ್ತಿದ್ದನು. ರಾಮುಸಿಂಗನು ಗಣಪತರಾಯನನ್ನು ಕಂಡಕೂಡಲೆ ಚಟ್ಟನೆ ಎದ್ದುನಿಂತು ಕೈಯೊಳಗಿನ ಗುಡುಗುಡಿಯನ್ನು ಒಂದು ಮಾಡದಲ್ಲಿಟ್ಟು ಅವನಿಗೆ ಬಹು ವಿನಯದಿಂದ ಮುಜುರೆಮಾಡಿ, ಕೂಡಲಿಕ್ಕೆ ಬಾಕು ಸ್ವಚ್ಛಮಾಡಿ ಕೊಟ್ಟನು. ಗಣಪತರಾಯನು ಆ ಬಾಕಿನಮೇಲೆ ಕೂತುಕೊಂಡು ಅವನ ಸಂಗಡ, ಆ ಮಾತು ಈ ಮಾತುಆಡಿ--ರಾಮುಸಿಂಗ, ನನ್ನ ಕೋಣೆಯ ನೆರೆಯಲ್ಲಿರುವ ಮುರಾರಿಪಂತನನ್ನು ನೀನು ಬಲ್ಲೆಯಷ್ಟೇ? ಅವನ ಉದರನಿರ್ವಾಹವು ಹೇಗೆ ಸಾಗುತ್ತದೆ? ಅವನು ಯಾರು? ನಿನಗೆ ಗೊತ್ತದೆಯೇನು? ಎಂದು ಕೇಳಿದನು. ಅದಕ್ಕೆ ರಾಮುಸಿಂಗನು ಮುರಾರಿಪಂತನ ವಿಷಯವಾಗಿ ತನಗೆ ಗೊತ್ತಿದ್ದ ನಾಲ್ಕು ಮಾತುಗಳನ್ನು ಹೇಳಿದನು. ಹೇಗಂದರೆ:—

" ಗಣಪತರಾಯರೇ, ಈ ಮುರಾರಿಪಂತನು ತನ್ನ ಹೆಂಡತಿಯೊಡನೆ ಈ ವಠಾರಕ್ಕೆ ಬಂದು ಮೂರು ವರ್ಷಗಳಾಗುತ್ತ ಬಂದವು. ಇವನು ತನ್ನ ಬಾಡಿಗೆಯನ್ನು ತಿಂಗತಿಂಗಳಿಗೆ ಕೊಟ್ಟು ತೀರಿಸುವನು. ನೆರೆಹೊರೆಯವರ ಕೂಡ ಈ ಗಂಡಹೆಂಡಿರು ಎಂದೂ ಗುದ್ದಾಡುವದಿಲ್ಲ. ಇವನ ಹೆಂಡತಿಯು ಬಹು ಸುಶೀಲೆಯಾಗಿರುವಳು. ಅವಳು ನೆರೆಮನೆಯ ಹೆಂಗಸರಕೂಡ ಹಾಳ ಹರಟೇ ಕೊಚ್ಚಿ ಕಾಲಕಳೆಯುವದಿಲ್ಲ. ಯಾವಾಗಲೂ ನಗೆಮುಖದಿಂದ ಇದ್ದು, ಯಾವದಾದರೊಂದು ಉದ್ಯೋಗದಲ್ಲಿ ತೊಡಗಿರುವಳು. ಮನೆಯ ಕೆಲಸಗಳನ್ನು ಮಾಡಿ ಉಳಿದ ವೇಳೆಯಲ್ಲಿ ಉಣ್ಣೆಯ ಅರಿವೆಗಳನ್ನು ಹೆಣೆಯುವದು, ಕಸೂತಿ ತೆಗೆಯುವದು ಮುಂತಾದ ಕೆಲಸಗಳನ್ನು ಮಾಡುತ್ತಿರುವಳು. ಆದರೆ ಮುರಾರಿಪಂತನ ಉದ್ಯೋಗವು ಇನ್ನೂ ಯಾರಿಗೂ ಗೊತ್ತಾಗಿರುವದಿಲ್ಲ. ಅವನು ಒಮ್ಮೊಮ್ಮೆ ಬೆಳಗುಮುಂಜಾನೆ ಮನೆಬಿಟ್ಟು ಹೊರಬಿದ್ದವನು, ರಾತ್ರಿ ಹನ್ನೆರಡು ಹೊಡೆಯುವತನಕ ತಿರುಗಿ ಮನೆಗೆ ಬರುವದಿಲ್ಲ; ಒಮ್ಮೊಮ್ಮೆ ಎಂಟೆಂಟು ಹತ್ತು ಹತ್ತು ದಿವಸಗಳವರೆಗೆ ಒಬ್ಬರ ದೃಷ್ಟಿಗೂ ಬೀಳುವದಿಲ್ಲ; ಮನೆಗೆಯಾವಾಗಬರುತ್ತಾನೋ,ಮನೆಯಿಂದಯಾವಾಗಹೋಗು

ತ್ತಾನೋ ಗೊತ್ತಾಗುವದಿಲ್ಲ. ಒಮ್ಮೊಮ್ಮೆ ನಾಲ್ಕಾರು ದಿವಸ ಎಲ್ಲಿಯೂ ಹೋಗುವದಿಲ್ಲ; ಮನೆಯಲ್ಲಿಯೇ ಇರುವನು. ಅವನು ಒಮ್ಮೆ ಶ್ರೀಮಂತನಂತೆ ಜರತಾರೀ ವಸ್ತ್ರಗಳನ್ನು ಉಪಯೋಗಿಸಿದರೆ, ಮತ್ತೊಮ್ಮೆ ತೀರ ಸಾಧಾರಣ ತರದ ಅರಿವೆಗಳನ್ನು ಧರಿಸಿಕೊಂಡು ಅಡ್ಡಾಡುವನು. ಸಾರಾಂಶ, ಇವನ ನಡವಳಿಕೆಯು ಹೀಗೆಯೇ, ಎಂದು ಖಂಡಿತವಾಗಿ ಹೇಳಲಿಕ್ಕೆ ಬರುವಂತೆಇಲ್ಲ.

ಗಣಪತರಾಯನು ರಾಮಸಿಂಗನ ಈ ಮಾತುಗಳನ್ನು ಶಾಂತಮನಸ್ಸಿನಿಂದ ಕೇಳುತ್ತಿದ್ದನು. ನಡುನಡುವೆ ಅವನ ಮುಖಮುದ್ರೆಯಮೇಲೆ ಆಶ್ಚರ್ಯದ ಚಿಹ್ನಗಳು ಕಾಣುತ್ತಿದ್ದವು. ರಾಮಸಿಂಗನ ಹೇಳಿಕೆಯಿಂದ ಅವನಿಗೆ ಸಮಾಧಾನವಂತೂ ಆಗಲೇ ಇಲ್ಲ; ಆದರೆ ಅವನ ಜಿಜ್ಞಾಸೆಯು ಮಾತ್ರ ಮತ್ತಿಷ್ಟು ಹೆಚ್ಚಾಯಿತು. ಅವನು ಪುನಃ ರಾಮಸಿಂಗನಕೂಡ ಏನೂ ಮಾತಾಡದೆ, ಹೋಗಿಬರುತ್ತೇನೆಂದು ಹೇಳಿ, ಮನಸ್ಸಿನಲ್ಲಿ ಅದೇ ವಿಷಯವನ್ನು ವಿಚಾರಮಾಡುತ್ತ ತನ್ನ ಕೋಣೆಗೆಬಂದನು. ಅಂದಿನಿಂದ ಅವನು ತನ್ನ ನಿತ್ಯದ ಕೆಲಸಗಳನ್ನು ಬಿಟ್ಟು, ಮುರಾರಿಪಂತನ ವರ್ತನವನ್ನು ಸೂಕ್ಷ್ಮರೀತಿಯಿಂದ ಪರೀಕ್ಷಿಸಹತ್ತಿದನು. ನಾಲ್ಕೇ ದಿವಸಗಳಲ್ಲಿ ರಾಮಸಿಂಗನು ಹೇಳಿದ ಮಾತಿನ ಅನುಭವವು ಅವನಿಗಾಯಿತು. ಮುರಾರಿಪಂತನು ಮೊದಲಿನಂತೆ ಗಣಪತರಾಯನ ಕೋಣೆಗೆ ಆಗಾಗ್ಗೆ ಬರುತ್ತಿದ್ದನು. ಅವನು ಗಣಪತರಾಯನ ಕೂಡ ಎಷ್ಟು ಹೊತ್ತು ಮಾತನಾಡಿದರೂ, ತನ್ನ ಸ್ವಂತದಸಂಬಂಧದಿಂದ ಒಂದು ಚಕಾರ ಶಬ್ದವನ್ನು ತೆಗೆಯುತ್ತಿದ್ದಿಲ್ಲ. ಅದರಿಂದ ಅವನ ವಿಷಯವಾಗಿ ಗಣಪತರಾಯನ ಮನಸ್ಸಿನಲ್ಲಿ ನಾನಾಪ್ರಕಾರದ ಕಲ್ಪನೆಗಳು ಬರಹತ್ತಿದವು. “ಈ ಮುರಾರಿಪಂತನು ಒಳ್ಳೇ ಮನುಷ್ಯನಿದ್ದಂತೆ ತೋರುವದಿಲ್ಲ. ಮುಂಬಯಿಯಲ್ಲಿ ಎಷ್ಟೋ ಮೋಸಗಾರರು ಒಳ್ಳೇ ಮಾತುಗಳಿಂದ ಜನರನ್ನು ಮೋಸಗೊಳಿಸಿ, ತಮ್ಮ ಕಾರ್ಯವನ್ನು ಸಾಧಿಸುತ್ತಿರುತ್ತಾರೆಂದು ನಾನು ಕೇಳುತ್ತಿದ್ದೆನು. ಈ ಗೃಹಸ್ಥನು ಅವರೊಳಗಿನವನೊಬ್ಬನಿರಬಹುದೆಂದು ತೋರುತ್ತದೆ. ನಾನು ಹಿಂದುಮುಂದು ನೋಡದೆ ಇವನ ಕೂಡ ಗೆಳೆತನ ಮಾಡಿದೆನು. ನನ್ನಿಂದ ಇದೊಂದು ಪ್ರಮಾದವಾಯಿತು. ಇನ್ನು ಹೇಗಾದರೂಮಾಡಿ ಇದರೊಳಗಿಂದ ಆದಷ್ಟು ಬೇಗನೆ ಜಾರಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಇವನು ನನ್ನಮೇಲೆ ಒಮ್ಮಿಲ್ಲೊಮ್ಮೆ ಬಿಕ್ಕಟ್ಟಿನ ಪ್ರಸಂಗವನ್ನು ತಾರದೆ

ಬಿಡಲಿಕ್ಕಿಲ್ಲ. ಇಂಥ ಜನರು ತಮ್ಮ ಕಾರ್ಯ ಸಾಧಿಸುವದಕ್ಕಾಗಿ ಜನರ ಪ್ರಾಣತಕ್ಕೊಳ್ಳಲಿಕ್ಕೆ ಸಹ ಹಿಂದುಮುಂದು ನೋಡುವದಿಲ್ಲವಂತೆ. ಇಷ್ಟು ದಿವಸ ಆದದ್ದಾಯಿತು. ಇನ್ನು ಮುಂದೆ ಈ ಮನುಷ್ಯನಕೂಡ ವಿಶೇಷ ಬಳಿಕೆಯನ್ನು ಮಾಡದೆ ಇದ್ದರಾಯಿತು " ಇತ್ಯಾದಿ ಹಲವು ವಿಚಾರಗಳಿಂದ ಅವನ ಮನಸ್ಸು ಸಂಶಯಗ್ರಸ್ತವಾಗಿ ತಲ್ಲಣಗೊಂಡಿತು.

———[೦]———

೨ನೆಯ ಪ್ರಕರಣ.

## ಭಯಂಕರವಾದ ನೋಟ!!



ಹಿಂದಿನಪ್ರಕರಣದಲ್ಲಿ ಹೇಳಿದಂತೆ ಗಣಪತರಾಯನು ಚಿಂತಾಯುಕ್ತನಾಗಿ, ಮುರಾರಿಪಂತನನ್ನು ಇನ್ನುಮೇಲೆ ತನ್ನ ಮನೆಗೆ ಬರಗೊಡಬಾರದೆಂತಲೂ, ಅವನು ತಾನಾಗಿಯೇ ಬಂದರೆ ಅವನ ಕೂಡ ಮೊದಲಿನಂತೆ ವಿಶೇಷ ಮಾತಾಡಬಾರದೆಂತಲೂ ಮನಸ್ಸಿನಲ್ಲಿ ವಿಚಾರಮಾಡುತ್ತಿದ್ದನು. ಮನಸ್ಸಿನಲ್ಲಿ ಬಂದ ವಿಚಾರಗಳನ್ನು ಪೂರ್ಣವಾಗಿ ಆಲೋಚಿಸದೆ, ಕೂಡಲೆ ಅವುಗಳನ್ನು ಹೊರಗೆಆಡುವದರಿಂದಒಮ್ಮೊಮ್ಮೆ ಬಹಳಕೇಡಾಗುವ ಸಂಭವವಿರುತ್ತದೆ ವಿಚಾರವಂತರು ಹಾಗೆ ಎಂದೂಮಾಡುವದಿಲ್ಲ. ಗಣಪತರಾಯನು ಒಳ್ಳೇ ವಿಚಾರವಂತನಿದ್ದದರಿಂದ, ಮುರಾರಿಪಂತನವಿಷಯವಾಗಿ ಅವನ ಮನಸ್ಸಿನಲ್ಲಿ ನಾನಾತರದ ಕಲ್ಪನೆಗಳು ಬರುತ್ತಿದ್ದರೂ, ಅವನು ಅವುಗಳನ್ನುಅವನ ಎದುರಿಗೆ ಆಡಿ ಅವನ ಮನಸ್ಸನ್ನು ನೋಯಿಸದೆ, ತನ್ನ ಮನಸ್ಸಿನ ಸಮಾಧಾನಕ್ಕಾಗಿ ಅವನಿಗೆ ಹಲವು ತರದ ಪ್ರಶ್ನೆಗಳನ್ನು ಕೇಳುತ್ತಿದ್ದನು. ಇದರಿಂದ ಗಣಪತರಾಯನ ಮನಸ್ಸಿನಲ್ಲಿ ಬಂದ ಸಂಶಯವು ಮುರಾರಿಪಂತನಿಗೆ ಗೊತ್ತಾಗಿದ್ದರೂ, ಅವನು ಗಣಪತರಾಯನ ಸಂಶಯವನ್ನು ದೂರಮಾಡಿದ್ದಿಲ್ಲ. ಇನ್ನುಮೇಲೆ ಮಾತ್ರ, ಗಣಪತರಾಯನು ಮುರಾರಿಪಂತನಿಗೆ " ನೀನು ನಿನ್ನ ಉದ್ಯೋಗವನ್ನು ಹೇಳಿದ ಹೊರತು ನನ್ನ ಕೋಣೆಯಲ್ಲಿ ಕಾಲಿಡಕೂಡದೆಂದು ಖಂಡಿತವಾಗಿ ಹೇಳಬೇಕೆಂತಲೂ, ಅಲ್ಲಿಯವರೆಗೆ ತಾನು ಅವನ ಉಸಾಬರಿಗೆ ಹೋಗಬಾರದೆಂತ " ಲೂ ಮನಸ್ಸಿನಲ್ಲಿ ನಿರ್ಧಾರಮಾಡಿಕೊಂಡನು.

ಒಂದಾನೊಂದು ದಿವಸ ರಾತ್ರಿ ಸರಿಹೊತ್ತಿನಲ್ಲಿ ಗಣಪತರಾಯನು ‘ ರಿಪನ್ ’ ಎಂಬ ನಾಟಕಗೃಹದಿಂದ ಹೊರಟು ತನ್ನ ಕೋಣೆಗೆ ಬಂದನು. ಮುರಾರಿಪಂತನು ಅವನಿಗಿಂತ ಮುಂಚಿತವಾಗಿಯೇ ಬಂದು ಕದತೆಗೆಯುವದಕ್ಕಾಗಿ ಸಪ್ಪಳಮಾಡಿ, ತನ್ನ ಹೆಂಡತಿಯನ್ನು ಎಬ್ಬಿಸುತ್ತಿದ್ದನು. ಅದನ್ನು ಕಂಡು ಗಣಪತರಾಯನು ತಾನು ಮಾಡಿದ ನಿರ್ಧಾರವನ್ನು ನೆನಿಸಿ, ಸುಮ್ಮನೆ ತನ್ನ ಕೋಣೆಯ ಕದತೆಗೆದು ಹಾಸಿಗೆಹಾಸಿಕೊಂಡು ಮಲಗಿದನು. ಅಷ್ಟರಲ್ಲಿ ಮುರಾರಿಪಂತನು ಮತ್ತೆ ಮನೆಯಿಂದ ಹೊರಬಿದ್ದು ಅಟ್ಟವನ್ನು ಇಳಿಯುವಂತೆಯೂ, ಅವನ ಹೆಂಡತಿಯು ಅವನನ್ನು ಕಳಿಸಹೋದಂತೆಯೂ ಗಣಪತರಾಯನಿಗೆ ಭಾಸನಾಯಿತು. ಯಾಕಂದರೆ ಮುರಾರಿಪಂತನು ಅಟ್ಟವನ್ನು ಇಳಿಯುವ ಕಾಲಕ್ಕೆ “ ಜಾಗ್ರತೆಯಿಂದ ಇರ್ರಿ, ಆ ” ಎಂದು ಸಣ್ಣಸ್ವರದಿಂದ ಯಾರೋ ಅಂದಂತೆ ಕೇಳಿಸಿತು. ಹೆಂಡತಿಯ ಹೊರತು ಈ ಸ್ಥಳದಲ್ಲಿ, ಮತ್ತು ಈ ಪ್ರಕಾರವಾಗಿ ಮುರಾರಿಪಂತನಿಗೆ ಎಚ್ಚರಿಕೆಯನ್ನು ಹೇಳುವವರು ಮತ್ತೆ ಯಾರೂ ಇದ್ದಿಲ್ಲ. ಮೇಲಿನ ಶಬ್ದಗಳು ಗಣಪತರಾಯನ ಕರ್ಣರಂಧ್ರಕ್ಕೆ ಮುಟ್ಟುವಷ್ಟರಲ್ಲಿ, ಮುರಾರಿಪಂತನು ಅಟ್ಟವನ್ನಿಳಿದು ವಠಾರವನ್ನು ದಾಟಿ, ದಾರಿಗೆ ಕೂಡಿದ್ದನು. ಗಣಪತರಾಯನು ಅವನ ಉಸಾಬರಿಯನ್ನು ಮಾಡಲಿಕ್ಕಿಲ್ಲೆಂದು ಮನಸ್ಸಿನಲ್ಲಿ ನಿಶ್ಚಯಿಸಿದ್ದರೂ, ಈ ಎಲ್ಲ ಚಮತ್ಕಾರಗಳನ್ನು ಕಂಡು ಅವನಿಗೆ ಬಹಳ ಆಶ್ಚರ್ಯವಾಯಿತು. ಅವನು ಪುನಃ ಮುರಾರಿಪಂತನ ವಿಷಯವಾಗಿ ವಿಚಾರಮಾಡಹತ್ತಿದನು. “ ಇಂಥ ಅಪರಾತ್ರಿಯಲ್ಲಿ ಈ ಗೃಹಸ್ಥನು ಎಲ್ಲಿಂದ ಬಂದನು? ಪುನಃ ಎಲ್ಲಿಗೆ ಹೋಗುತ್ತಿರಬಹುದು? ಈ ಹೊತ್ತಿನಲ್ಲಿ ಇವನು ಮಾಡತಕ್ಕಂಥ ಮಹತ್ವದ ಕಾರ್ಯವಾದರೂ ಏನಿರಬಹುದು? ಒಳ್ಳೇದು. ಇವನು ಸತ್ಕಾರ್ಯಕ್ಕಾಗಿ ಹೋಗುತ್ತಿದ್ದರೆ, ಇವನ ಹೆಂಡತಿಯು ಇವನಿಗೆ ಎಚ್ಚರಿಕೆಯನ್ನು ಹೇಳುವ ಕಾರಣವೇನು?” ಇತ್ಯಾದಿ ಹಲವು ಪ್ರಶ್ನಗಳು ಮನಸ್ಸಿನಲ್ಲಿ ಹುಟ್ಟಿ, ಒಂದಕ್ಕೂ ಅವನಿಗ ಸಮಾಧಾನಕರವಾದ ಉತ್ತರವು ಹೊರಡಲಿಲ್ಲ. ನಿದ್ದೆಯ ಹೊತ್ತಂತೂ ಮೀರಿಹೋಗಿತ್ತು; ಆದುದರಿಂದ ಈ ವಿಚಾರದಲ್ಲಿಯೇ ಆಮಗ್ಗಲು ಈಮಗ್ಗಲು ಹೊರಳಾಡುತ್ತಿರುವಷ್ಟರಲ್ಲಿ ಸ್ವಲ್ಪ ಜಂಪು ಹತ್ತಿತು. ಮತ್ತು ಅದೇ ನೋಡಿಬಂದ “ ತ್ರಾಟಿಕಾ ” ನಾಟಕದ ಒಂದು ಪ್ರವೇಶವನ್ನು ಕನಸ್ಸಿನಲ್ಲಿ

ಕಂಡನು. ಆ ಕನಸಿನಲ್ಲಿ "ಸಿಟ್ಟಿನ ಪ್ರತಾಪರಾಯನು ಹುಚ್ಚನೂ, ವಿನೋದಿಯೂ ಆದ ತನ್ನ ಸೇವಕನಿಗೆ ಒಳಗಿನವರನ್ನು ಎಬ್ಬಿಸಲಿಕ್ಕೆ ಆಜ್ಞಾಪಿಸುತ್ತಿದ್ದನು. ಅವನು 'ನಾನೊಲ್ಲೆ, ಬೇಕಾದರೆ ನೀನೇ ಎಬ್ಬಿಸು' ಎಂದು ಅನ್ನುತ್ತಿದ್ದನು. ಈ ಪ್ರಕಾರ ಅವರಿಬ್ಬರೂ ಬಾಗಿಲಲ್ಲಿ ನಿಂತು ನೀನು—ತಾನೆಂದು ವಾದಿಸಿಯಾಡುತ್ತಿರುವಷ್ಟರಲ್ಲಿ, ರಾಣೋಜಿರಾಯನೆಂಬವನು ಅವ್ಯವಸ್ಥೆಯಿಂದ ಹಚ್ಚಡವನ್ನು ಹೊದ್ದುಕೊಂಡು, ಅದರ ಚುಂಗುಗಳನ್ನು ಗಟ್ಟಿಯಾಗಿ ಅವಚಿಕೊಂಡು ಕದತೆಗೆದು, 'ಯಾರವರು' ಎಂದು ಹೊರಬಿದ್ದನು." ಇತ್ಯಾದಿ ಸಂಗತಿಗಳು ನಡೆದಿದ್ದವು. ಅಷ್ಟರಲ್ಲಿ ಗಣಪತರಾಯನಿಗೆ ತನ್ನ ಕೋಣೆಯ ಬಾಗಿಲಲ್ಲಿ ಯಾರೋ ಬಂದು ಕದವನ್ನು ತಟ್ಟಿ "ಗಣಪತರಾಯರೆ, ಗಣಪತರಾಯರೆ" ಎಂದು ಕೂಗುತ್ತಿರುವಂತೆ ಭಾಸವಾಯಿತು. ಅವನು ಅರನಿದ್ದೆಯೊಳಗಿಂದ ಎಚ್ಚತ್ತು ಬಾಗಿಲತೆರೆದು ನೋಡುತ್ತಾನೆ, ಭಯಂಕರವಾದ ನೋಟವುಅವನ ಕಣ್ಣಿಗೆ ಬಿದ್ದಿತು!! ಬಂದವನ ಮೈಯೊಳಗಿನ ಸ್ವೆರಣವು ಹರಿದುಚಿಂದಿಯಾಗಿತ್ತು, ಅವನತಲೆಗೆಒಂದೆರಡು ಸ್ಥಳಗಳಲ್ಲಿ ಗಾಯಗಳಾಗಿ ನೆತ್ತರವು ಹರಿಯುತ್ತಿತ್ತು, ಉಟ್ಟ ದೋತರವೆಲ್ಲ ರಕ್ತಮಯವಾಗಿ ಹೋಗಿತ್ತು, ಮೋರೆಯು ಭಯಂಕರವಾಗಿ ತೋರುತ್ತಿತ್ತು, ಅವನ ಬೆನ್ನಹಿಂದೆ ಒಬ್ಬ ತರುಣ ಸ್ತ್ರೀಯು ಮೇಣಬತ್ತಿಯ ದೀಪವನ್ನು ಹಿಡಕೊಂಡು ನಿಂತಿದ್ದಳು, ಅವಳ ಮುಖಮುದ್ರೆಯಮೇಲೆ ಹೆದರಿಕೆಯ ಲಕ್ಷಣವು ಒಡೆದು ಕಾಣುತ್ತಿತ್ತು, ಆ ಗೃಹಸ್ಥನು ದೃಷ್ಟಿಗೆ ಬಿದ್ದಕೂಡಲೆ ಗಣಪತರಾಯನ ಮನಸ್ಸಿನಲ್ಲಿ ನಾನಾಪ್ರಕಾರದ ಕಲ್ಪನಾತರಂಗಗಳು ಏಳಹತ್ತಿದವು; ಮಲಗುವ ಪೂರ್ವದಲ್ಲಿ ಮಾಡಿದ ವಿಚಾರಗಳು ನೆನಪಾಗಹತ್ತಿದವು; ಆದರೆ ಅವನು ಈ ಕಾಲಕ್ಕೆ ಯಾವ ವಿಚಾರಕ್ಕೂ ಆಸ್ಪದಕೊಡದೆ, ಬಹು ಕರುಣಾಸ್ವರದಿಂದ— "ಏನು ಮುರಾರಿಪಂತರೇ, ಇದೇನಾಯಿತು ?" ಎಂದು ಕೇಳಿದನು.

ಅದಕ್ಕೆ ಮುರಾರಿಪಂತನು ಶಾಂತಮನಸ್ಸಿನಿಂದ ಕೈಸನ್ನೆಮಾಡಿ,–ಗಣಪತರಾಯರೆ, ಒಳಗೆ ನಡೆಯಿರಿ, ಮೆಲ್ಲಗೆ ಮಾತಾಡಿರಿ. ಯಾರಾದರೂ ಕೇಳಿಯಾರು. ನೀವೆಲ್ಲರೂ ಗಾಬರಿಯಾಗುವಂತೆ ನನ್ನ ಸ್ಥಿತಿಯು ಕೆಟ್ಟಿಲ್ಲ, ನನ್ನ ತಲೆಗೆ ಒಂದೆರಡು ಕಡೆಗೆ ಸ್ವಲ್ಪ ಪೆಟ್ಟು ತಾಕಿರುವದು. ತಾವು ಡಾಕ್ಟರರಿರುವದರಿಂದ ಇದಕ್ಕೆ ಈಗಲೇ ತಕ್ಕ ಉಪಚಾರವನ್ನು ಮಾಡೀರೆಂದು ನಂಬಿ

ತಮ್ಮ ಕಡೆಗೆ ಬಂದಿದ್ದೇನೆ. ದಯವಿಟ್ಟು ನನ್ನ ಸಲುವಾಗಿ ತಾವು ಶ್ರಮ ತಕ್ಕೊಂಡರೆ ಬಹಳ ಉಪಕಾರವಾಗುವದು, ಎಂದು ದೈನ್ಯದಿಂದ ಹೇಳಿಕೊಂಡನು.

ಅದನ್ನು ಕೇಳಿ ಗಣಪತರಾಯನು ಮುರಾರಿಪಂತನ ವಿಷಯವಾಗಿ ತನ್ನ ಮನಸ್ಸಿನಲ್ಲಿದ್ದ ವಿಚಾರಗಳನ್ನು ಕೆಲಹೊತ್ತು ಮರೆತು, ಲಗುಬಗೆಯಿಂದ— “ ಒಳ್ಳೇದು, ಒಳಗೆ ಬರ್ರಿ; ಈ ಆರಾಮಖುರ್ಚಿಯಮೇಲೆ ಅಡ್ಡಾಗಿರಿ. ನಾನು ಅದಕ್ಕೆ ಯೋಗ್ಯ ಉಪಚಾರವನ್ನು ಮಾಡುತ್ತೇನೆ”ಂದು ಹೇಳಿ, ಗಾಯವಾದ ಸ್ಥಳವನ್ನು ಚೆನ್ನಾಗಿ ಪರೀಕ್ಷಿಸಿದನು. ಮುರಾರಿಪಂತನ ಗಾಯವು ಅಷ್ಟು ಭಯಂಕರವಾಗಿದ್ದಿಲ್ಲ. ಅದರೊಳಗಿಂದ ತುಸುತುಸುವೇ ಆಗಲಿ, ರಕ್ತಪ್ರವಾಹವು ಏಕ ಪ್ರಕಾರವಾಗಿ ನಡೆದಿತ್ತು. ಗಣಪತರಾಯನು ಅದನ್ನೆಲ್ಲ ಸ್ವಚ್ಛವಾಗಿ ತೊಳೆದುಕಟ್ಟಿ, ಸ್ವಲ್ಪ ಹೊತ್ತು ಸ್ವಸ್ಥವಾಗಿ ಬಿದ್ದುಕೊಳ್ಳಿರೆಂದು ಹೇಳಿದನು.

ಆಗ ಮುರಾರಿಪಂತನು ಕೃತಜ್ಞತೆಯ ಸ್ವರದಿಂದ—ಡಾಕ್ಟರರೇ, ತಮ್ಮ ಉಪಕಾರವು ನನ್ನ ಮೇಲೆ ಅನಂತವಾಯಿತು. ಉಪಾಯಗಾಣದೆ ಇಂತಹ ಅಪರಾತ್ರಿಯಲ್ಲಿ ತಮ್ಮನ್ನು ಶ್ರಮಬಡಿಸಿದ್ದಕ್ಕಾಗಿ ಕ್ಷಮಿಸಿರಿ. ಎಂದು ಅಂದನು. ಅದಕ್ಕೆ ಗಣಪತರಾಯನು—ಛೇ! ಛೇ! ಶ್ರಮವೆಲ್ಲಿಯದು? ಇದು ನಮ್ಮ ಉದ್ಯೋಗವೇ ಇರುತ್ತದೆ, ಎಂದು ಉತ್ತರಕೊಟ್ಟನು.

ಮುರಾರಿಪಂತನು ತನ್ನ ಮನೆಗೆ ಹೊರಟುಹೋದನು. ಇತ್ತ ಕೆಲ ಹೊತ್ತಿನಮೇಲೆ ಗಣಪತರಾಯನು ಹಾಸಿಗೆಯಮೇಲೆ ಬಂದು ಬಿದ್ದುಕೊಂಡನು. ಇನ್ನುಮೇಲೆ ನಿದ್ದೆಹತ್ತುವ ಆಶೆಯಂತು ಎಳ್ಳಷ್ಟೂ ಇದ್ದಿಲ್ಲ. ಅದರಿಂದ ಮತ್ತೆ ಅವನ ಮನಸ್ಸು ಮುರಾರಿಪಂತನ ವಿಷಯವಾಗಿ ಆಲೋಚನೆ ಮಾಡತೊಡಗಿತು.

“ ಈ ಮುರಾರಿಪಂತನು ಹೇಳಿ ಮಾಡಿಸಿದ ಘಟಿಂಗರೊಳಗಿನವನೊಬ್ಬನಿರುತ್ತಾನೆ. ಇಂದು ರಾತ್ರಿ ಯಾವದೋ ಒಂದು ಕೆಟ್ಟ ಕೃತ್ಯದಲ್ಲಿ ಸೇರಿ, ಪೆಟ್ಟುಮುರಿ ಹೊಡತತಿಂದು ಬಂದಂತೆ ಕಾಣುತ್ತದೆ. ” ಎಂಬೀ ಪ್ರಕಾರ ತರ್ಕವಿತರ್ಕಗಳಲ್ಲಿ ಅವನಿಗೆ ನಿದ್ದೆಹತ್ತಿ ಹೋಯಿತು.

ಮರುದಿವಸ ಪ್ರಾತಃಕಾಲದ ಎಂಟು ಗಂಟೆಯ ಸುಮಾರಕ್ಕೆ ಮುರಾ

2

ರಿಪಂತನು ಗಣಪತರಾಯನನ್ನು ಕರೆಯಲು, ಆಗ ಅವನು ಇನ್ನೂ ಮಲ ಗಿದ್ದನು. ಮುರಾರಿಪಂತನ ಧ್ವನಿಯನ್ನು ಕೇಳಿ ಗಣಪತರಾಯನು ಎಚ್ಚತ್ತು ಬಾಗಿಲು ತೆರೆದನು; ಮತ್ತು ರಾತ್ರಿ ಕಟ್ಟಿದ ಗಾಯವನ್ನು ಬಿಚ್ಚಿ ಪುನಃ ಸ್ವಚ್ಛ ವಾಗಿ ತೊಳೆದು ಕಟ್ಟಿದನು. ಮುರಾರಿಪಂತನು ಹೋಗುವಾಗ ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಗಣಪತರಾಯನಿಗೆ ಹೇಳಲು, ಆತನಿಗೆ ಬಹಳ ಆಶ್ಚರ್ಯವಾಯಿತು. ಮತ್ತು ಊಟಕ್ಕೆ ಹೋಗಬೇಕೋ ಹೋಗಬಾರದೋ ಎಂಬ ಬಗ್ಗೆ ಅವನ ಮನಸ್ಸಿನಲ್ಲಿ ಅನೇಕ ಪ್ರಕಾರದ ವಿಚಾರಗಳು ನಡೆದು, ಕಡೆಯಲ್ಲಿ ಹೋಗಬೇಕೆಂದು ನಿಶ್ಚಯಿಸಿ ಆತನು ಹೊರಟನು. ಗಣ ಪತರಾಯನು ಮುರಾರಿಪಂತನ ಮನೆಯಲ್ಲಿ ಕಾಲು ಹಾಕಿದ್ದು ಇದೇ ಮೊದಲು. ಇದಕ್ಕೂ ಪೂರ್ವದಲ್ಲಿ ಅವನು ಅವನ ಮನೆಗೆ ಎಂದೂಹೋಗಿ ದ್ದಿಲ್ಲ. ಅವನ ಮನೆಯಲ್ಲಿ ಎಲ್ಲ ಸಾಮಾನುಗಳು ಸ್ವಚ್ಛವಾಗಿಯೂ, ಅಚ್ಚುಕಟ್ಟಾಗಿಯೂ ಇಡಲ್ಪಟ್ಟಿದ್ದವು. ಊಟವು ಸಾಧಾರಣ ತರದ್ದಾದರೂ ವ್ಯವಸ್ಥೆಯಿಂದ ಮಾಡಲ್ಪಟ್ಟದ್ದರಿಂದ ಉತ್ಕೃಷ್ಟವಾಗಿತ್ತು. ಇವನ್ನೆಲ್ಲ ನೋಡಿ ಗಣಪತರಾಯನಿಗೆ ಆ ದಂಪತಿಗಳ ವಿಷಯವಾಗಿ ಬಹಳ ಆಶ್ಚರ್ಯವಾಯಿತು. ಊಟವುಮುಗಿದಮೇಲೆ ಮುರಾರಿಪಂತನು ಕೊಟ್ಟ ಚಿರೂಟವನ್ನು ಸೇದುತ್ತ ಹೊರಗೆ ಬರುವಾಗ,ಒಂದು ಮಾಡದಲ್ಲ ಇಟ್ಟಿದ್ದ ಚದುರಂಗಗಳೂ, ಪಟವೂ, ಗಣಪತರಾಯನ ಕಣ್ಣಿಗೆ ಬಿದ್ದವು. ಕೂಡಲೆ ಅವನು ಮುರಾರಿಪಂತನಿಗೆ– "ಏನರಿ ಮುರಾರಿಪಂತರೆ, ನೀವು ಚದುರಂಗದ ಆಟವನ್ನು ಆಡಬಲ್ಲಿರೆಂದು ತೋರುತ್ತದೆ?" ಎಂದು ಪ್ರಶ್ನೆಮಾಡಲು, ಅದಕ್ಕೆ "ಅಹುದು, ಕೆಲಕೆಲವು ಆಟಗಳು ನನಗೆ ತಿಳಿಯುತ್ತವೆ; ನೀವು ಆಡುತ್ತಿದ್ದರೆ ಒಂದು ಆಟವಾಗಲಿ ಬೇಕಾ ದರೆ" ಎಂದು ಮುರಾರಿಪಂತನು ಸಹಜವಾಗಿ ಉತ್ತರಕೊಟ್ಟನು.

ಗಣಪತರಾಯನಿಗೆ ಈ ಆಟದ ಲಕ್ಕು ಬಹಳವಿತ್ತು. ಅವನುಒಮ್ಮೊಮ್ಮೆ ಆ ಆಟದಭರದಲ್ಲಿ ಅಭ್ಯಾಸವನ್ನು ಸಹ ಬಿಟ್ಟುಕೊಟ್ಟು ಇಡಿ ರಾತ್ರಿಯನ್ನೆಲ್ಲ ಕಳೆಯುತ್ತಿದ್ದನು. ಅದರಿಂದ ಮುರಾರಿಪಂತನ ಮಾತಿಗೆ ಒಪ್ಪಿಕೊಂಡು ಪಟವನ್ನು ಹಾಸಿ ಸಿದ್ಧಮಾಡಿದನು. ಆಟವು ಪ್ರಾರಂಭವಾಯಿತು. ಒಂದೆರಡು ಆಟಗಳು ಆಗುವಷ್ಟರಲ್ಲಿ ಮುರಾರಿಪಂತನು ಚನ್ನಾಗಿ ಆಡುತ್ತಾನೆಂದು ಗಣ ಪತರಾಯನಿಗೆ ಗೊತ್ತಾಯಿತು. ಇಷ್ಟೇ ಅಲ್ಲ, ಕಟ್ಟಕಡೆಗೆ ಮುರಾರಿಪಂತನಿಂದ

ಗಣಪತರಾಯನಮೇಲೆ ಒಂದು ಪ್ಯಾದೇಮಾತು ಸಹ ಮಾಡಲ್ಪಟ್ಟಿತು. ಹೀಗೆ ಪ್ರತಿದಿವಸ ಅವರಿಬ್ಬರಿಗೆ ಇದೊಂದು ಕೆಲಸವೇ ಆಯಿತು. ಗಣಪತರಾಯನಿಗೂ ಕೆಲಸವಿದ್ದಿಲ್ಲ; ಮುರಾರಿಪಂತನೂ ನೋವಿನ ಮೂಲಕ ಮನೆಯಲ್ಲಿಯೇ ಇರುತ್ತಿದ್ದನು. ಆದ್ದರಿಂದ ಅವರಿಗೆ ಆಟದ ಭರದಲ್ಲಿ ಊಟದ ಪರಿವೆ ಸಹ ಇಲ್ಲದಂತಾಯಿತು. ಒಂದೊಂದು ದಿವಸ ಕ್ಲಬ್ಬಿನ ಊಟದ ಹೊತ್ತು ತಪ್ಪಿತೆಂದರೆ, ಗಣಪತರಾಯನು, ಮುರಾರಿಪಂತನ ಮನೆಯೊಳಗೇ ಊಟಮಾಡುತ್ತಿದ್ದನು. ಈ ಮೇರೆಗೆ ಆ ಉಭಯತರ ಪರಿಚಯಕ್ಕೆ ಬೇರೆ ಸ್ವರೂಪ ಉಂಟಾಗಿ ಅವರಿಬ್ಬರೂ ಪರಮ ಸ್ನೇಹಿತರಾದರು. ಆದರೂ ಗಣಪತರಾಯನಿಗೆ ಮುರಾರಿಪಂತನ ಹೊಟ್ಟೇ ಸಾಗಿಸುವ ಉದ್ಯೋಗವು ತಿಳಿದಿದ್ದಿಲ್ಲ. ಅವನು ಅದನ್ನು ಶೋಧಿಸುವ ಹವ್ಯಾಸವನ್ನು ಇನ್ನೂ ಬಿಟ್ಟಿದ್ದಿಲ್ಲ. ೮-೧೦ ದಿವಸಗಳಮೇಲೆ ಮುರಾರಿಪಂತನ ಗಾಯವು ಮಾಜಿ ಅವನು ಮತ್ತೆ ಮೊದಲಿನಂತೆ ತನ್ನ ಕೆಲಸಕ್ಕೆ ಹತ್ತಿದನು.

---

೩ ನೆಯ ಪ್ರಕರಣ.

## ಮತ್ತೊಂದು ಭಯಂಕರವಾದ ನೋಟ.

( ೦ )

ಹೀಗಿರುತ್ತಿರಲು, ಒಂದಾನೊಂದು ದಿವಸ ಸಾಯಂಕಾಲಕ್ಕೆ ಅವರಿಬ್ಬರೂ ಕೂಡಿ ಬ್ಯಾಕ್‌ಬೇದಲ್ಲಿ ತಿರುಗಾಡುವಾಗ ಒಬ್ಬ ಮನುಷ್ಯನು ಬಂದು ಮುರಾರಿಪಂತನಿಗೆ ಕೈಸನ್ನೆ ಮಾಡಿ ಒತ್ತಟ್ಟಿಗೆ ಕರೆದು, ಅವನ ಕಿವಿಯಲ್ಲಿ ಏನೋ ಹೇಳಿದನು. ಅದನ್ನು ಕೇಳಿದ ಕೂಡಲೆ ಮುರಾರಿಪಂತನ ಮುಖಮುದ್ರೆಯು ಚಿಂತಾಯುಕ್ತವಾಯಿತು. ಕೂಡಲೆ ಅವನು ಗಾಂಭೀರ್ಯದಿಂದ ಆ ಬಂದ ಮನುಷ್ಯನಿಗೆ—"ಒಳ್ಳೇದು, ನೀನು ಮುಂದೆ ನಡೆ. ನಾನು ನಿನ್ನೆ ಬೆನ್ನಹಿಂದೆ ಇದೇ ಈಗ ಬರುವೆನು." ಎಂದು ಹೇಳಿದನು.

ಇದನ್ನು ಕೇಳಿ ಆ ಮನುಷ್ಯನು ತಿರುಗಿ ಹೋದ ಬಳಿಕ ಮುರಾರಿಪಂತನು ಗಣಪತರಾಯನನ್ನು ಕುರಿತು—ಗಣಪತರಾವ, ನನ್ನನ್ನು ಕ್ಷಮಿಸಿರಿ. ಒಂದು ಮಹತ್ವದ ಕೆಲಸದ ಸಲುವಾಗಿ ನಾನು ಈಗಲೇ ಹೋಗುವದು ಅವಶ್ಯವಿರುತ್ತದೆ, ಎಂದನು.

## ಮತ್ತೊಂದು ಭಯಂಕರವಾದ ಸೋಟ.

ಆಗ ಗಣಪತರಾಯನು—ತನ್ನ ಇಷ್ಟ ಉದ್ದೇಶವನ್ನು ಸಾಧಿಸಿಕೊಳ್ಳ ಲಿಕ್ಕೆ ಇದೇ ತಕ್ಕ ಸಮಯವೆಂದರಿತು, ಮುರಾರಿಪಂತನನ್ನು ಕುರಿತು ಧೈರ್ಯ ದಿಂದ—ನಿಮ್ಮ ಕೆಲಸಕ್ಕೆ ನನ್ನಿಂದ ಪ್ರತಿಬಂಧವಾಗದಂತಿದ್ದರೆ, ನಾನೂ ನಿಮ್ಮ ಸಂಗಡ ಬರುತ್ತೇನೆ, ಅಂದನು.

ಶೂನ್ಯದೃಷ್ಟಿಯಿಂದ ಮುರಾರಿಪಂತನು ತುಸು ಹೊತ್ತು ವಿಚಾರಿಸಿ. — "ಓಹೋ ಏನೂ ಪ್ರತಿಬಂಧವಿಲ್ಲ. ತಾವು ಬಂದರೆ ಬಹಳ ಒಳ್ಳೇದಾಗು ವದು" ಎಂದು ಹೇಳಿ, ಕೂಡಲೆ ಚರ್ನಿರೋಡ ಸ್ಟೇಶನ್ನ ಬಳಿಯ ಗೇಟವಿಂದ ಠಾಕೂರ ದ್ವಾರದ ರಸ್ತೆಯ ಕಡೆಗೆ ತಿರುಗಿದನು. ಗಣಪತರಾಯನು ಅವನ ಬೆನ್ನುಹತ್ತಿದನೆಂಬದನ್ನು ಬೇರೆ ಹೇಳುವ ಕಾರಣವಿಲ್ಲ.

ದಾರೀಹಿಡಿದು ಹೋಗುವಾಗ ಮುರಾರಿಪಂತನ ಮನಸ್ಸು ವಿಚಾರ ದಲ್ಲಿ ಮಗ್ನವಾಗಿ ಹೋದಂತೆ ಕಾಣುತ್ತಿತ್ತು. ಅವನ ಕೂಡ ವ್ಯರ್ಥವಾಗಿ ಮಾತಾಡಿ, ಅವನ ವಿಚಾರಕ್ಕೆ ಭಂಗತರುವದು ಗಣಪತರಾಯನ ಮನಸ್ಸಿಗೆ ಬರಲಿಲ್ಲ. ಮುರಾರಿಪಂತನ ಗೂಢವಾದ ಜೀವನಕ್ರಮವು ಇನ್ನು ಸ್ವಲ್ಪ ಕಾಲದಲ್ಲಿಯೇ ತನಗೆ ತಿಳಿಯುವದೆಂಬ ಆಶೆಯಿಂದ ಗಣಪತರಾಯನು ಮನ ಸ್ಸಿನಲ್ಲಿಯೇ ಆನಂದಬಡುತ್ತ, ಅವನ ಬೆನ್ನುಹತ್ತಿ ಓಡುತ್ತಿದ್ದನು. ಯಾಕೆಂ ದರೆ, ಮುರಾರಿಪಂತನು ಕಾಲಿಲೆ ಬಲು ಹಗುರಾಗಿದ್ದನು. ಆದರಿಂದ ಅವನ ಸಂಗಡ ನಡೆಯಬೇಕಾದರೆ ಗಣಪತರಾಯನಂಥ ಕಿರಿಗಾಲಿನ ಮನುಷ್ಯನು ಓಡಲೇಬೇಕಾಗುತ್ತಿತ್ತು. ತುಸು ಹೊತ್ತಿನಲ್ಲಿ ಅವರು ಠಾಕೂರ ದ್ವಾರದ ಹತ್ತರ ಇರುವ ಪಾಲವರೋಡಕ್ಕೆ ಬಂದು, ಅಲ್ಲಿಂದ ಕಾಂದೇವಾಡಿಯೊಳಗಿನ ಒಂದು ಓಣಿಯ ದೊಡ್ಡ ವಠಾರಕ್ಕೆ ಬಂದು ತಲುಪಿದರು. ಅಲ್ಲಿ ಬಹು ಜನರು ನೆರೆದಿದ್ದು, ಜನರ ದಟ್ಟಣಿಯನ್ನು ಕಡಿಮೆ ಮಾಡುವದಕ್ಕಾಗಿ ಪೋಲೀಸರು ತಮ್ಮ ಕೈಲಾದಷ್ಟು ಪ್ರಯತ್ನವನ್ನು ಮಾಡುತ್ತಿದ್ದರು. ಆದಾಗ್ಯೂ ಪ್ರತಿಯೊಬ್ಬ ಮನುಷ್ಯನು ಪೋಲೀಸರ ಹೊಡತವನ್ನು ಸಹ ಲೆಕ್ಕಿಸದೆ ಹೇಗಾದರೂ ಮಾಡಿ ವಠಾರದೊಳಗೆ ಹೊಕ್ಕು, ಆದ ಸಂಗತಿಯನ್ನು ಅರಿತು ಕೊಳ್ಳುವದನ್ನು ನಿಶ್ಚಯಿಸಿದಂತೆ ತೋರುತ್ತಿತ್ತು. ಮುರಾರಿಪಂತನೂ ಗಣ ಪತರಾಯನೂ ಒಳ್ಳೇ ಸಾಹಸದಿಂದ ವಠಾರದ ಬಾಗಿಲವರೆಗೆ ಬಂದು ಮುಟ್ಟಿ ದರು; ಆದರೆ ಬಾಗಿಲಲ್ಲಿ ನಿಂತುಕೊಂಡಿದ್ದ ಒಬ್ಬ ಕರೇ ಡಗಲಿಯವನು

ಅವರಿಗೆ ಒಳಗೆ ಹೋಗಲಿಕ್ಕೆ ಪ್ರತಿಬಂಧ ಮಾಡಿದನು. ಆಗ ಮುರಾರಿಪಂತನು ಆ ಸಿಪಾಯಿಯನ್ನು ತಿರಸ್ಕಾರದೃಷ್ಟಿಯಿಂದ ನೋಡಿ—ಹುಚ್ಚಾ, ಹುಸೇನಿ, ನಿನಗೆ ನನ್ನ ಗುರುತಿಲ್ಲವೆ? ನನ್ನ ಸಂಗಡ ಇದ್ದ ಈ ಗೃಹಸ್ಥನು ಮಾತ್ರ ನನ್ನ ಸ್ನೇಹಿತನು, ಎಂದು ತುಸು ಗಟ್ಟಿಸಿ ಮಾತಾಡಿದನು.

ಅದನ್ನು ಕೇಳಿ ಆ ಸಿಪಾಯಿಯು ಮುರಾರಿಪಂತನನ್ನು ದಿಟ್ಟಿಸಿನೋಡಿ, ಪಶ್ಚಾತ್ತಾಪಯುಕ್ತವಾದ ಮುಖಮುದ್ರೆಯಿಂದ ಅವನಿಗೂ ಅವನ ಸ್ನೇಹಿತನಾದ ಗಣಪತರಾಯನಿಗೂ ಒಳ್ಳೇ ಭಕ್ತಿಪೂರ್ವಕವಾಗಿ ಮೂರುಸಾರೆ ಸಲಾಮುಮಾಡಿ, ಅವರಿಗೆ ಹೋಗಲಿಕ್ಕೆ ದಾರೀಕೊಟ್ಟನು. ಮುರಾರಿಪಂತನಿಗೆ ಅವನ ಸಲಾಮು ಎಲ್ಲಿ ಬೇಕಾಗಿತ್ತು? ದಾರಿ ಸಿಕ್ಕ ಕೂಡಲೆ ಅಟ್ಟದ ಮೆಟ್ಲುಗಳ ಕಡೆಗೆ ನಡೆದನು. 'ಬಸವನ ಹಿಂದೆ ಬಾಲ' ವೆಂಬಂತೆ ಗಣಪತರಾಯನು ಬೆನ್ನಹಿಂದಿಂದೇ ನಡೆದಿದ್ದನು. ಅಟ್ಟದಮೇಲೆ ಹೋಗಿ ನೋಡಲು, ಅಲ್ಲಿ ಅದೇ ವಠಾರದ ಕೆಲವು ಜನರು ಒತ್ತಟ್ಟಿಗೆ ನೆರೆದಿದ್ದು, ಒಬ್ಬ ಮನುಷ್ಯನು ಅವರಿಗೆ ಏನೇನೋ ಹೇಳುತ್ತ ನಿಂತಿದ್ದನು; ತೋರಿಕೆಯಲ್ಲಿ ಆ ಮನುಷ್ಯನು ಬಹಳ ಹೊಲಸು ಕಾಣುತ್ತಿದ್ದನು; ಮತ್ತು ಅವನು ಬಹಳ ಗಾಬರಿಯಾದಂತೆ ತೋರುತ್ತಿತ್ತು. ಅವರೆಲ್ಲರೂ ಈ ಉಭಯತರನ್ನು ಕಂಡು ಬದಿಗಾಗಿ ಮಾರ್ಗಕೊಟ್ಟರು.

ಮುರಾರಿಪಂತನು ತುಸು ಮುಂದಕ್ಕೆ ಹೋಗಿ, ಜನರ ಕೂಡ ಮಾತಾಡುತ್ತ ನಿಂತಿದ್ದ ಆ ಮನುಷ್ಯನಿಗೆ "ಯಾವ ಕೋಣೆಯಲ್ಲಿ" ಎಂದು ಪ್ರಶ್ನೆ ಮಾಡಿದನು.

ಅವನು "೭ನೇ ಕೋಣೆಯಲ್ಲಿ" ಎಂದು ನಡುಗುವ ಸ್ವರದಿಂದ ಉತ್ತರಕೊಟ್ಟನು.

ತತ್‍ಕ್ಷಣವೇ ಅವರಿಬ್ಬರೂ ಆ ಕೋಣೆಯೊಳಗೆ ಪ್ರವೇಶಮಾಡಿದರು. ಕೋಣೆಯ ಬಾಗಿಲೊಳಗೆ ಕಾಲಿಟ್ಟಕೂಡಲೆ ಒಂದು ಭಯಂಕರ ನೋಟವು ಅವರ ಕಣ್ಣಿಗೆ ಬಿತ್ತು. ಗಣಪತರಾಯನಂತೂ ಅದನ್ನು ಕಂಡು ಹೌಹಾರಿ ಹೋದನು. ಮುಂದೆ ಎಂದಾದರೂ ಈ ಪ್ರಸಂಗವು ಅವನಿಗೆ ನೆನಪಾದರೆ ಮೈಯಲ್ಲಿ ನಡಗುಹುಟ್ಟಿ, ಒಮ್ಮೆಲೆ ಮೈಮೇಲೆ ಮುಳ್ಳುಗಳು ಏಳುತ್ತಿದ್ದವು. ಮತ್ತು ಈ ವಿಷಯವಾಗಿ ಅವನು— "ನಾನು ಹತ್ತು ಸಾವಿರ ವರ್ಷಗಳ

ವರೆಗೆ ಬದುಕಿದರೂ ಈ ಸಂಗತಿಯನ್ನು ಎಂದೂ ಮರೆಯಲಾರೆನು " ಎಂದು ಅನ್ನುತ್ತಿದ್ದನು. ಹಾಗು ಆ ಕಾಲದ ಸ್ಥಿತಿಯನ್ನು ಅವನಿಗೆ ವರ್ಣಿಸಲು ಹೇಳಿದರೆ, ಇದೇ ಈಗ ನೋಡಿಬಂದ ಸಂಗತಿಯೆಂಬಂತೆ ಒಳ್ಳೇ ಯಥಾರ್ಥ ವಾಗಿ ಬಣ್ಣಿಸುತ್ತಿದ್ದನು. ತನ್ನ ಹಾಗೆ ಮುರಾರಿಪಂತನಸ್ಥಿತಿಯು ಆಗಿಲ್ಲೆಂಬದು ಅವನ ಮುಖಮುದ್ರೆಯಿಂದ ಒಡೆದು ಕಾಣುತ್ತಿತ್ತು. ಗಣಪತರಾಯನು ಕೋಣೆಯ ಬಾಗಿಲಲ್ಲಿಯೇ ನಿಂತುಬಿಟ್ಟದ್ದನು. ಮುರಾರಿಪಂತನು ನಿಃಶಂಕೆ ಯಿಂದ ಒಳಗೆ ಹೊಕ್ಕು ಗಣಪತರಾಯನನ್ನು ಕರೆದನು. ಆಗ ಅವನು ಅಂಜಿ ಕೆಯಿಂದ ಸಾವಕಾಶವಾಗಿ ಹೆಜ್ಜೆಗಳನ್ನಿಕ್ಕುತ್ತ ಮುರಾರಿಪಂತನ ಬೆನ್ನಹಿಂದೆ ಬಂದು ನಿಂತುಕೊಂಡನು.

ಆ ಕೋಣೆಯ ಮಧ್ಯಭಾಗದಲ್ಲಿ ಹಾಸಿದ ಹಾಸಿಗೆಯ ಮೇಲೆ ಒಬ ಮುದುಕನ ಹೆಣವು ಅವರ ದೃಷ್ಟಿಗೆ ಬಿತ್ತು. ಅವನ ಎದೆಯೊಳಗಿಂದ ಅತಿ ಶಯ ರಕ್ತಸ್ರಾವವಾದಂತೆ ಕಾಣುತ್ತಿತ್ತು; ಅವನ ಎರಡೂ ಕೈಗಳು ಸೆಟೆದು ಕಟ್ಟಿಗೆಯಾಗಿದ್ದವು. ಹಾಸಿಗೆಯ ಮೇಲೆ ಎಲ್ಲ ಕಡೆಗೆ ರಕ್ತವು ಸಿಡಿದಿತ್ತು. ಹೊತ್ತುಕೊಳ್ಳುವ ಅರಿವೆಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಈ ಭಯಂಕರ ವಾದ ನೋಟವನ್ನೆಲ್ಲ ಕಂಡು, ಗಣಪತರಾಯನ ಎದೆಯೊಡೆದು ನೀರಾ ಯಿತು. ಮುರಾರಿಪಂತನು ಅವನನ್ನು ಸಾವರಿಸಿ ಹಿಡಿಯದಿದ್ದರೆ, ಇಷ್ಟರೊ ಳಗೇ ಅವನು ತಲೆ ತಿರುಗಿ ಬೀಳುತ್ತಿದ್ದನು. ಗಣಪತರಾಯನು ವೈದ್ಯಕಿಯು ಅಭ್ಯಾಸಮಾಡುತ್ತಿದ್ದದ್ದರಿಂದ ಹೆಣಗಳನ್ನು ನೋಡುವ ರೂಢಿಯು ಅವನಿ ಗಿತ್ತು; ಆದರೆ ಕೊಲೆಯಾದಲ್ಲಿಗೆ ಹೋಗಿ ಪ್ರೇತವನ್ನು ನೋಡುವದು ಅವ ನಿಗೆ ಇದೇ ಮೊದಲನೆಯ ಪ್ರಸಂಗವಾಗಿತ್ತು. ಕೋಣೆಯೊಳಗೆ ಹೊಕ್ಕಕೂ ಡಲೆ ಗಣಪತರಾಯನು, ಇಲ್ಲಿ ಬಹುಶಃ ಕೊಲೆಯಾಗಿರಬಹುದೆಂದು ತರ್ಕಿಸಿ ದ್ದನು; ಅದರಂತೆಯೇ ಅಲ್ಲಿ ಆಗಿತ್ತು. ಗಣಪತರಾಯನ ಸ್ಥಿತಿಯು ಹೀಗಾ ಗಿದ್ದರೂ ಮುರಾರಿಪಂತನ ಮನಸ್ಸಿನಮೇಲೆ ಯಾವಬಗೆಯ ಪರಿಣಾಮವೂ ಆಗಿದ್ದಿಲ್ಲ. ಅವನು ಸಮಾಧಾನದಿಂದ ಪ್ರೇತದ ಬಳಿಗೆಹೋಗಿ ಕುಳಿತುಕೊಂ ಡನು. ಇವರಿಗಿಂತ ಪೂರ್ವದಲ್ಲಿಯೇ ಮ್ಯಾಜಿಸ್ಟ್ರೇಟನೂ, ಅವನ ಕಾರಕೂ ನನೂ, ಇನ್‌ಸ್ಪೆಕ್ಟರನೂ ಬಂದಿದ್ದರು. ಈ ಉಭಯತರು ಹೋಡಕೂಡಲೆ ಇನಸ್ಪೆಕ್ಟರನು ಮುರಾರಿಪಂತನನ್ನು ಕಂಡು—ಮುರಾರಿರಾವ, ನೀವು ಬಂದೆ

ಶ್ಚ್ನೆನೋ ನಿಜ; ಆದರೆ ನಿಮ್ಮ ಚಾತುರ್ಯವನ್ನು ಉಪಯೋಗಿಸುವ ಅವಶ್ಯಕತೆಯು ಉಳಿದಿರುವದಿಲ್ಲ. ಎಂದು ನಗೆಮೋರೆಯಿಂದ ಅಂದನು.

" ಅದೇಕೆ? " ಎಂದು ಮುರಾರಿಪಂತನು ಒಳ್ಳೇ ಔತ್ಸುಕ್ಯದಿಂದ ಪ್ರಶ್ನೆ ಮಾಡಿದನು;

ಅದಕ್ಕೆ ಇನಸ್ಪೆಕ್ಟರನು— " ಕೊಲೆ ಮಾಡಿದ ಮನುಷ್ಯನು ಸಿಕ್ಕಿರುತ್ತಾನೆ. ಅವನನ್ನು ಹಿಡಿಯುವದಕ್ಕಾಗಿ ಮ್ಯಾಜಿಸ್ಟ್ರೇಟ ಸಾಹೇಬರು ವಾರಂಟು ತೆಗೆದು, ಪೋಲೀಸ ಜಮಾದಾರರನ್ನೂ, ಅವನ ಸಂಗಡ ಕೆಲವು ಪೋಲೀಸ ಸಿಪಾಯಿಗಳನ್ನೂ ಕಳಿಸಿರುತ್ತಾರೆ " ಎಂದು ಉತ್ತರ ಕೊಟ್ಟನು.

ಆಗ ಮುರಾರಿಪಂತನು ನಿರಾಶೆಯಿಂದ—ಕೊಲೆ ಮಾಡಿದ ಮನುಷ್ಯನು ಸಿಕ್ಕನೇ? ಎಂದು ಮ್ಯಾಜಿಸ್ಟ್ರೇಟರನ್ನುದ್ದೇಶಿಸಿ ಕೇಳಲು,

" ಅಹುದು, ಸಿಕ್ಕಿರುವನು. ಕೊಲೆ ಮಾಡಿದ ಮನುಷ್ಯನು ಯಾರೆಂಬದು ನನಗೆ ಗೊತ್ತಾಗಿದೆ. ಆ ನೀಚನು ಈ ಮುದುಕನ ಎದೆಗೆ ಘಾಯ ಮಾಡಿ ಪ್ರಾಣಹೋಯಿತೆಂದು ತಿಳಿದು ಓಡಿ ಹೋಗಿರುತ್ತಾನೆ; ಆದರೆ ಭವಿತವ್ಯವನ್ನು ತಪ್ಪಿಸುವರಾರು? ಕೊಂದ ಮನುಷ್ಯನು ಯಾರೆಂಬದು ಸರಕಾರಕ್ಕೆ ಕೂಡಲೆ ತಿಳಿಯಬೇಕೆಂದು, ಗಾಯದಿಂದ ಹೊರಡುವ ರಕ್ತದಲ್ಲಿ ತನ್ನ ಬೆರಳು ಎದ್ದಿ, ಕೊಲೆ ಮಾಡಿದ ಮನುಷ್ಯನ ಅರ್ಧ-ಮುರ್ಧ ಹೆಸರನ್ನು ಬರೆದು ಮೃತಪಟ್ಟಿರುತ್ತಾನೆ. ಅಕೋ, ಆ ಮುದುಕನ ತಲೆಗಿಂಬಿನ ಕಡೆಗೆ ನೋಡಿರಿ. ಅಲ್ಲಿ ಮೂರು ಅಕ್ಷರಗಳು ಬರೆಯಲ್ಪಟ್ಟವೆ " ಎಂದು ಮ್ಯಾಜಿಸ್ಟ್ರೇಟರು ಆಡಿದ ಮಾತುಗಳನ್ನು ಕೇಳಿದಕೂಡಲೆ ಮುರಾರಿಪಂತನು ಅತ್ತಕಡೆಗೆ ನೋಡಹತ್ತಿದನು. ಗಣಪತರಾಯನ ದೃಷ್ಟಿಯೂ ಆ ಅಕ್ಷರಗಳ ಕಡೆಗೆ ಹೋಯಿತು. ಆಗ ಅವರು ರಕ್ತದಿಂದ ಬರೆಯಲ್ಪಟ್ಟ " ವಿಶ್ವಾಸ " ಈ ಮೂರು ಅಕ್ಷರಗಳನ್ನು ಅಲ್ಲಿ ಕಂಡರು.

" ಸಾಹೇಬರೇ, ಈ ಅಕ್ಷರಗಳಿಂದ ನೀವು ಏನು ತಿಳಿಯುವಿರಿ? " ಎಂದು ಮುರಾರಿಪಂತನು ಇನಸ್ಪೆಕ್ಟರ ಸಾಹೇಬರಿಗೆ ಕೇಳಲು, ಅವರು—ಈ ಮುದುಕನಿಗೆ ವಿಶ್ವಾಸನೆಂಬವನೊಬ್ಬ ಅಣ್ಣನ ಮಗನಿರುತ್ತಾನೆ. ಮುದುಕನು ಅವನನ್ನು ಬಹಳವಾಗಿ ಪ್ರೀತಿಸುತ್ತಿದ್ದನೆಂದು ನಾನು ಕೇಳಿದ್ದೇನೆ. ಅಂದಬಳಿಕ ಇಲ್ಲಿ ಬರೆದ " ವಿಶ್ವಾಸ " ಈ ಅಕ್ಷರಗಳಿಂದ ಅವನೇ ಈ ಮುದು

ಕನ ಕೊಲೆ ಮಾಡಿರಬಹುದೆಂದು ಸಿದ್ಧವಾಗುವದಿಲ್ಲವೆ? ಎಂದು ಕೇಳಿದರು.

ಅದಕ್ಕೆ— " ಸೈ, ಹಾಗೇ ಇರಬಹುದು " ಎಂದು ಮುರಾರಿಪಂತನು ಉತ್ತರಕೊಟ್ಟನು; ಆದರೆ ಈ ಪ್ರಕಾರದ ಉತ್ತರಕೊಡುವದು ಅವನ ಮನಸ್ಸಿನಲ್ಲಿದ್ದಂತೆ ಅವನ ಮುಖಮುದ್ರೆಯು ಹೇಳುತ್ತಿರಲಿಲ್ಲ.

ಮ್ಯಾಜಿ—ಬೇಗನೆ ವಿಶ್ವಾಸರಾಯನು ಪೋಲೀಸ ಚಾವಡಿಗೆ ಒಯ್ಯಲ್ಪಡುವನು, ಬಹುಶಃ ಅವನು ತನ್ನ ತಪ್ಪು ಒಪ್ಪಿಕೊಳ್ಳದೆ ಇರಲಿಕ್ಕಿಲ್ಲ. ಅವನ ಅಪರಾಧಕ್ಕೆ ಈ ಮೂರು ಅಕ್ಷರಗಳು ಪೂರ್ಣ ಸಾಕ್ಷಿಯಾಗಿರುವವು. ಇದಲ್ಲದೆ ಅವನೊಬ್ಬನಿಗೇ ಈ ಮುದುಕನ ಕೊಲೆಯಿಂದ ಲಾಭವಾಗುವಂತಿದೆ. ಯಾಕಂದರೆ, ಈ ಮುದುಕನ ಬಳಿಗೆ ಬೇಕಾದಷ್ಟು ಹಣವಿದ್ದು, ವಿಶ್ವಾಸರಾಯನ ಹೊರತು ಅನ್ಯಆಪ್ತರಿಷ್ಟರು ಇವನಿಗೆ ಇಲ್ಲೆಂದು ಚೌಕಸಿಯಿಂದ ನನಗೆ ಗೊತ್ತಾಗಿದೆ. ಮತ್ತು ಹೆಣವನ್ನು ಪರೀಕ್ಷಿಸಲು, ಈ ಕೊಲೆಯು ನಿನ್ನೆ ರಾತ್ರಿ ೯|| ಗಂಟೆಯಿಂದ ೧೨ ಗಂಟೆಯೊಳಗೆ ಆಗಿರಬಹುದೆಂದು ತೋರುತ್ತದೆ. ಈ ವಠಾರದ ಕಾವಲುಗಾರರನ್ನು ಕೇಳಲು,-ವಿಶ್ವಾಸರಾಯನು ನಿನ್ನೆ ರಾತ್ರಿ ೯ ಗಂಟೆಯ ಸುಮಾರಕ್ಕೆ ಈ ವಠಾರಕ್ಕೆ ಬಂದಿದ್ದು, ೧೧ ಗಂಟೆಗೆ ತಿರುಗಿ ಹೋದನು. " ಎಂದು ಹೇಳಿದನು. ಈ ಮುದುಕನ ಮನೆಯಲ್ಲಿ ಒಬ್ಬ ಅಡಿಗೆಯವನಿರುತ್ತಾನೆ. ಅವನು ಸಹ " ವಿಶ್ವಾಸರಾಯನು ನಿನ್ನೆ ಇಲ್ಲಿಗೆ ಬಂದದ್ದನ್ನು ನಾನು ನೋಡಿದ್ದೇನೆ " ಂದು ಹೇಳುವನು. ಈ ಎಲ್ಲ ಸಂಗತಿಗಳಿಂದ ಕೊಲೆ ಮಾಡಿದವನು ವಿಶ್ವಾಸರಾಯನೇ, ಎಂಬಬಗ್ಗೆ ನಿಮಗೇನಾದರೂ ಸಂಶಯವುಂಟೇ? ಎಂಪು ಪ್ರಶ್ನಮಾಡಿದನು.

ಮುರಾರಿಪಂತನು ಅವರ ಮಾತಿಗೆ ಒಪ್ಪಿಕೊಳ್ಳುವ ಮನಸ್ಸಿಲ್ಲದೆ, ಸದ್ಯಕ್ಕಂತೂ ನಿಮ್ಮ ಮಾತೇ ಸರಿಯಾಗಿ ತೋರುವದು. ಆದರೆ ಕೊಲೆಮಾಡಿದ ಮನುಷ್ಯನು ತೀರ ಹುಚ್ಚನಿದ್ದಂತೆ ಕಾಣುತ್ತದೆ, ಇರಲಿ. ಮುದುಕನ ಬಳಿಯಲ್ಲಿರುವ ಹಣವನ್ನು ಕದಿಯುವ ಉದ್ದೇಶದಿಂದ ಯಾವನೋ ಒಬ್ಬ ಕಳ್ಳನು ಈ ಕೊಲೆಯನ್ನು ಮಾಡಿದ್ದಾನೆಂದು ಪೋಲೀಸರಿಗೆ ತಿಳಿಯಪಡಿಸುವದಕ್ಕಾಗಿ, ಆ ಮನುಷ್ಯನು ಪೆಟ್ಟಿಗೆಯನ್ನು ಒಡೆದು ಇಲ್ಲವೆ ವಸ್ತುವಡಿವೆಗಳನ್ನು ಎತ್ತಿಕೊಂಡು ಹೋದದ್ದು, ನಿಮ್ಮ ದೃಷ್ಟಿಗೆ ಬಿದ್ದಿರುವದೋ? ಎಂದನು

ಇನಸ್ಪೆಕ್ಟರರು—ಇಲ್ಲಿಯ ವರೆಗಂತೂ ಅದು ನಮ್ಮ ದೃಷ್ಟಿಗೆ ಬಿದ್ದಿಲ್ಲ. ನೀವ

ದಂತೆ ಆ ವಿಶ್ವಾಸರಾಯನು ಕೇವಲ ಹುಚ್ಚನೇ ಇರುತ್ತಾನೆ. ಇದರಲ್ಲಿ ತಿಲ ಮಾತ್ರ ಸಂಶಯವಿಲ್ಲ. ಇವನು, ಯಾವಾಗಲೂ ನಮ್ಮ ಅನುಭವಕ್ಕೆ ಬಂದಂಥ ಪಕ್ಕಾ ಖೂನೀ ಮನುಷ್ಯರೊಳಗಿನವನಲ್ಲ, ಎಂದರು.

ಇಷ್ಟಾದ ಬಳಿಕ ಇನಸ್ಪೆಕ್ಟರರು ಮುರಾರಿಪಂತನನ್ನು ಒತ್ತಟ್ಟಿಗೆ ಕರೆದು, ಒಂದು ಕಿಡಿಕೆಯ ಹತ್ತರ ಬಹಳ ಹೊತ್ತಿನವರೆಗೆ ಏಕಾಂತವಾಡುತ್ತ ನಿಂತರು. ಮ್ಯಾಜಿಸ್ಟ್ರೇಟರು ತಮ್ಮ ಕಾರಕೂನನಿಂದ ಕೆಲವು ಮುದ್ದೆಯ ಮಾತುಗಳನ್ನು ಬರೆಯಿಸಹತ್ತಿದರು.

---

೪ನೆಯ ಪ್ರಕರಣ.

## ಓಹೋ! ಇದೇನಾಶ್ಚರ್ಯವು!!



ಹಿಂದಿನ ಪ್ರಕರಣದಲ್ಲಿ ಹೇಳಿದ ವಿಧಾನವು ನಡೆಯುತ್ತಿರಲು, ಅದನ್ನೆಲ್ಲ ಗಣಪತರಾಯನು ಸುಮ್ಮನೆ ಕುಳಿತುಕೊಂಡು ನೋಡುತ್ತಿದ್ದನು ಎಷ್ಟೋ ದಿವಸಗಳಿಂದ ಮುರಾರಿಪಂತನ ಉದ್ಯೋಗದ ವಿಷಯವಾಗಿ ಅವನ ಮನಸ್ಸಿನಲ್ಲಿ ಒಂದು ಗೂಢವು ಹೊಕ್ಕಿತ್ತು. ಅದು ಇಂದಿಗೆ ಬೈಲಿಗೆ ಬಿತ್ತು. ಅವನು ಮುಂಬಯಿಯ ಪೋಲೀಸರೊಳಗೆ ಹೆಸರಾದ ಒಬ್ಬ ಗುಪ್ತ ಪೋಲೀಸನೆಂಬುವದು ಆವನಿಗೆ ಈಗ ಗೊತ್ತಾಯಿತು. ಇದು ವಾಚಕರ ಮನಸ್ಸಿನಲ್ಲಿ ಸಹ ಬಂದಿರಬಹುದು. ಮುರಾರಿಪಂತನು ಅಕಾಲದಲ್ಲಿ ಹೊರಗೆ ಹೋಗುವದು, ಅಪರಾತ್ರಿಯಲ್ಲಿ ತಿರುಗಿ ಬರುವದು, ಘಳಿಗೆಘಳಿಗೆಗೆ ತನ್ನ ಪೋಷಾಕವನ್ನು ಬದಲಿಸುವದು, ಒಮ್ಮಿಂದೊಮ್ಮೆ ಇಲ್ಲದಂತಾಗುವದು ಮುಂತಾದ ಸಂಗತಿಗಳು ಈಗ ಸ್ಪಷ್ಟವಾದವು. ಒಟ್ಟಿಗೆ ಮುರಾರಿಪಂತನ ವಿಷಯವಾಗಿ ಗಣಪತರಾಯನ ಮನಸ್ಸಿನಲ್ಲಿ ಉಂಟಾದ ತಪ್ಪು ತಿಳುವಳಿಕೆಯು ತೀರ ಸುಳ್ಳಾಯಿತು; ಮತ್ತು ಇವನು ಸ್ವತಃ ದುಷ್ಕೃತ್ಯಗಳನ್ನು ಮಾಡದೆ, ಮಾಡುವವರನ್ನು ಗೊತ್ತು ಹಚ್ಚಿ, ತಕ್ಕ ಶಾಸನವನ್ನು ಮಾಡಿಸುವಂತಹ ಸರಕಾರದ ಗುಪ್ತ ನೌಕರನಿರುತ್ತಾನೆಂಬದನ್ನು ಗಣಪತರಾಯನು ಮನಗಂಡನು.

ರಾತ್ರಿ ಸರಿಹೊತ್ತುಮೀರಿಹೋದ ಮೇಲೆ ಮುರಾರಿಪಂತನು ಹೊರಗೆ ಹೋಗಿ ದ್ದನೆಂಬ್ದು, ಅವನ ಹೆಂಡತಿಯು ಎಚ್ಚರಿಕೆ ಹೇಳಿದ್ದನ್ನೂ, ಅವನಿಗೆ ಘಾಯ ತಟ್ಟಿದ್ದನ್ನೂ ಗಣಪತರಾಯನು ಕಣ್ಣಾರೆ ಕಂಡಿದ್ದನು, ಅವುಗಳ ಕಾರಣವು ಈಗ ಅವನಿಗೆ ಹೊಳೆಯಹತ್ತಿತು. ಇಂಥ ಪ್ರಾಮಾಣಿಕ ಮನುಷ್ಯನ ವಿಷ ಯವಾಗಿ ತನ್ನಲ್ಲಿ ಕೆಟ್ಟ ಅಭಿಪ್ರಾಯವು ಉಂಟಾದದ್ದರಿಂದ ಅವನಿಗೆ ಬಹಳ ಖೇದವಾಯಿತು. ಆದರೆ ಈ ಕಾಲಕ್ಕೆ ಅವನ ಮನಸ್ಸಿನ ಪ್ರವೃತ್ತಿಗಳು ಈ ಬಗೆಯ ವಿಚಾರಗಳನ್ನು ಮಾಡುವದರ ಕಡೆಗೆ ಇದ್ದಿಲ್ಲ. ಕಣ್ಣು ಮುಂದೆ ಇದ್ದ ಭಯಂಕರವಾದ ನೋಟವು ಅವನ ಮನಸ್ಸನ್ನೆಲ್ಲ ವ್ಯಾಪಿಸಿಕೊಂಡಿತ್ತು. ಅವನ ಮುಂಚಿನ ಹೆದರಿಕೆಯು ಈಗ ನಷ್ಟವಾದುದರಿಂದ, ಅವನು ಕೋಣೆಯ ಬಾಗಿಲಲ್ಲಿ ನಿಂತು ಒಳಗಿನ ಒಡವೆಗಳನ್ನು ಲಕ್ಷಪೂರ್ವಕವಾಗಿ ನೋಡುತ್ತಿ ದ್ದನು. ವರ್ತಮಾನಪತ್ರಗಳಲ್ಲಿ ಇಂತಹ ಅನೇಕ ಕೊಲೆಗಳ ವಿಷಯವಾಗಿ ಅವನು ಓದಿದ್ದನು. ಆದರೆ ಕೊಲೆ ಆದ ಸ್ಥಳದ ವರ್ಣನೆಯು ಇಲ್ಲಿ ಬೇರೆ ಯಾಗಿತ್ತು. ಅವನು ಓದಿದ ಒಂದು ಪ್ರಕಾರವಾದರೂ ಇಲ್ಲಿ ಅವನ ದೃಷ್ಟಿಗೆ ಬೀಳಲಿಲ್ಲ. ಕೋಣೆಯೊಳಗಿನ ಯಾವತ್ತು ಸಾಮಾನುಗಳು ಅಲ್ಲಿಂದಲ್ಲೆ ವ್ಯವ ಸ್ಥಿತವಾಗಿ ಇಡಲ್ಪಟ್ಟಿದ್ದವು. ಆ ಸಾಮಾನುಗಳಿಂದಲೂ, ಅರಿವೆಅಂಚಡಿಗಳಿಂದಲೂ ಆ ಮುದುಕನು ಒಬ್ಬ ಸುಖವಸ್ತು ಗೃಹಸ್ಥನಿರಬಹುದೆಂದು ತೋರುತ್ತಿತ್ತು. ಖುರ್ಚಿ, ಟೇಬಲು ಮೊದಲಾದ ಸಾಮಾನುಗಳ ಮೇಲೆ ಎಲ್ಲಿಯೂ ಧೂಳಿಯು ಬಿದ್ದಿದ್ದಿಲ್ಲ. ಕಿಡಿಕೆಗಳೂ ಅವುಗಳ ಕನ್ನಡಿಗಳೂ ಸ್ವಚ್ಛವಾಗಿದ್ದವು. "ಮುದು ಕನು ಮಲಗುವ ವಿಚಾರದಲ್ಲಿದ್ದ ಕಾಲಕ್ಕೆ ಈ ಕೊಲೆಯಾಗಿರಬಹುದೆಂದು" ಇನಸ್ಪೆಕ್ಟರರು ಆಡಿದ ಮಾತಿಗೆ ಗಣಪತರಾಯನ ಮನಸ್ಸು ಒಪ್ಪಿತು, ಹಾಸಿ ಗೆಯ ತಲೆಗಿಂಬಿನ ಕಡೆಗೆ ಇಟ್ಟ ಮೇಜಿನಮೇಲೆ ಒಂದು ಮೇಣಬತ್ತಿಯ ದೀಪವೂ ಒಂದು ಕಡ್ಡೀಪೆಟ್ಟಿಗೆಯೂ "ಟಾಯಿಮ್ಸ" ವರ್ತಮಾನ ಪತ್ರವೂ ಬಿದ್ದಿದ್ದವು.

ಈ ಎಲ್ಲ ವಸ್ತುಗಳನ್ನು ಗಣಪತರಾಯನು ಲಕ್ಷಪೂರ್ವಕವಾಗಿ ನೋಡುತ್ತಿದ್ದನು. ಆ ಕಾಲಕ್ಕೆ ಅವನ ಕಣ್ಣು ಫೋಟೋಗ್ರಾಫದ ಕ್ಯಾಮ ರಾದೊಳಗಿನ ಲೇನ್ಸವೇ ಆಗಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಯಾಕೆಂ ದರೆ ಅವನಿಗೆ ತುಸುಮಟ್ಟಿಗಾದರೂ ಚಿತ್ರಕಲೆಯ ಜ್ಞಾನವಿದ್ದರೆ, ಅಲ್ಲಿ ಕಂಡ

ನೋಟದ ಯಥಾರ್ಥವಾದ ಚಿತ್ರವನ್ನು ಬೇಕಾದಾಗ ತೆಗೆಯುವಷ್ಟು ಸ್ಪಷ್ಟ ವಾಗಿ ಅವನ ಮನಸ್ಸಿನ ಮೇಲೆ ಪರಿಣಾಮವಾಗಿತ್ತು. ಮುದುಕನ ಹಾಸಿಗೆಯ ಬಳಿಯಲ್ಲಿ ಒಂದು ಬೂಚು ( ಸಿಸೆಯ ಬೆಣೆ ) ಬಿದ್ದಿತ್ತು, ಅದು ಸಹ ಗಣಪತರಾಯನ ದೃಷ್ಟಿಯ ಮುಂದೆ ಹಾಯ್ದು ಹೋಯಿತು. ಇಂತಿಷ್ಟು ಸೂಕ್ಷ್ಮದೃಷ್ಟಿಯಿಂದ ಅವಲೋಕನ ಮಾಡುವಷ್ಟು ಶಕ್ತಿಯು ತನ್ನಲ್ಲಿ ಉಂಟೆಂದು ಗಣಪತರಾಯನಿಗೆ ಗೊತ್ತಾಗಿದ್ದಿಲ್ಲ.

ಗಣಗತರಾಯನು ದೂರದಲ್ಲಿ ನಿಂತು ಇಷ್ಟೆಲ್ಲ ಸಂಗತಿಗಳನ್ನು ನೋಡಿದ ಮೇಲೆ ಹತ್ತರಹೋಗಿ ಆ ಹೆಣವನ್ನು ನೋಡಬೇಕೆಂದು ಇಚ್ಛಿಸಿದನು. ಮನಸ್ಸನ್ನು ಎಷ್ಟು ಬಿಗಿಹಿಡಿದರೂ ವ್ಯರ್ಥವಾಯಿತು. ಅವನ ಅತಿಶಯವಾದ ಉತ್ಕಂಠೆಯೇ ಅವನನ್ನು ಆ ಪ್ರೇತದ ಬಳಿಗೆ ಎಳೆದೊಯ್ದಿತು. ಇಲ್ಲಿಗೆ ಬಂದದ್ದನ್ನು ಯಾರಾದರೂ ನೋಡಿದರೇನು? ಎಂದು ತನ್ನಷ್ಟಕ್ಕೆ ತಾನೇ ಪ್ರಶ್ನಮಾಡಿಕೊಂಡು ಸುತ್ತು ಮುತ್ತು ನೋಡಿದನು. ಆಗ ಅವನಿಗೆ ಯಾರೂ ನೋಡಲಿಲ್ಲೆಂದು ಕಂಡು ಬಂದಿತು. ಪೋಲೀಸ ಇನಸ್ಪೆಕ್ಟರನೂ, ಮುರಾರಿ ಪಂತನೂ ಏಕಾಂತವಾಡುತ್ತ ನಿಂತೇ ಇದ್ದರು. ಮ್ಯಾಜಿಸ್ಟ್ರೇಟರ ಕಾರಕೂನನು ಕಾಗದದ ಮೇಲೆ ಬರೆದ ಸಂಗತಿಗಳನ್ನು ತಿರುಗಿ ಓದಿ ಹೇಳುತ್ತಿದ್ದನು. ಈ ಪ್ರಕಾರ ಯಾವತ್ತು ಪರಿಸ್ಥಿತಿಯು ತನಗೆ ಅನುಕೂಲವಾಗಿರುವದನ್ನು ಕಂಡು ಬಳ್ಳೇ ಸಾಹಸದಿಂದ ಆ ಹೆಣದ ಬಳಿಗೆ ಹೋಗಿ ' ಡಿಸೆಕ್ಶನ್ ' ರೂಮಿನಲ್ಲಿ ಹೆಣವನ್ನು ಪರೀಕ್ಷಿಸುವಂತೆ ಈ ಹೆಣವನ್ನು ಪರೀಕ್ಷಿಸ ಹತ್ತಿದನು ಮ್ಯಾಜಿಸ್ಟ್ರೇಟನಾಗಲಿ, ಇನಸ್ಪೆಕ್ಟರನಾಗಲಿ ತನಗೆ ಏನು ಅಂದಾರೆಂಬ ಎಚ್ಚರಿಕೆ ಸಹ ಇಲ್ಲದೆ ಅವನು ಕೆಳಗೆ ಹೇಳಿದ ಪ್ರಕಾರ ಸೂಕ್ಷ್ಮದೃಷ್ಟಿಯಿಂದ ಹೆಣವನ್ನು ಪರೀಕ್ಷಿಸಿ ತನ್ನ ಮನಸ್ಸಿನಲ್ಲಿಯೇ ಆಲೋಚಿಸಹತ್ತಿದ್ದನು.

“ ಈ ಮನುಷ್ಯನು ಸುಮಾರು ೭೦–೭೫ ವರ್ಷದವನಾಗಿರಬಹುದು; ಶರೀರವು ಗಿಡ್ಡವಾಗಿದ್ದು ಸೊರಗಿರುತ್ತದೆ. ಆದರೂ ವಯಸ್ಸಿನ ಮಾನದಿಂದ ಶರೀರದಾರ್ಢ್ಯವು ಚೆನ್ನಾಗಿರುವದು. ಕೂದಲು ಹಣ್ಣಾಗಿರುವವು. ಕೆಲವು ಹಲ್ಲುಗಳು ಬಿದ್ದಿರುತ್ತವೆ. ಮುಖಮುದ್ರೆಯು ಶಾಂತವಾದದ್ದೂ, ನಗೆಮೋರೆಯುಳ್ಳದ್ದೂ ಆಗಿರುವದು. ಎರಡೂ ತುಟಿಗಳು ತೆರೆದಿರುವವು. ಇದರಿಂದ ಅವನು ಏನೋ ಮಾತಾಡುವಂತೆ ಕಾಣುತ್ತಿತ್ತು. ಈ ಎಲ್ಲ ಚಿಹ್ನಗಳನ್ನು

ನೋಡಲು ಇವನಿಗೆ ಒಮ್ಮೆಂದೊಮ್ಮೆ ಮರಣವು ಬಂದಿರಬಹುದೆಂದು ತೋರುತ್ತದೆ. ”

ಈ ಎಲ್ಲ ಸಂಗತಿಗಳು ಹೆಣವನ್ನು ನೋಡಿದ ಕೂಡಲೆ ಅವನ ಲಕ್ಷದಲ್ಲಿ ಬಂದವು; ಆದರೆ ಆ ಮನುಷ್ಯನ ಖೂನು ಆದ ಬಗ್ಗೆ ಈಗ ಗೊತ್ತಾದ ಮುಖ್ಯ ಪುರಾವೆಯು ಗತಿಏನು? ಒಮ್ಮೆಂದೊಮ್ಮೆಲೇ ಮರಣಹೊಂದುವದೂ, “ವಿಶ್ವಾಸ” ಈಅಕ್ಷರಗಳನ್ನು ಬರೆದು ಸಾಯುವದೂ, ಪರಸ್ಪರ ವಿರುದ್ಧವಾದ ಈ ಎರಡು ಮಾತುಗಳ ಏಕವಾಕ್ಯತೆಯಾಗುವ ಬಗೆಯಾವದು? ಪ್ರಾಣಘಾತಕವಾದ ಗಾಯವಾದ ಮೇಲೆ ಆ ಮೂರು ಅಕ್ಷರಗಳನ್ನು ಬರೆಯಬೇಕಾದರೆ ಈ ಮುದುಕನಿಗೆ ಬಹಳೇ ಕಷ್ಟವಾಗಿದ್ದೀತು. ತನ್ನನ್ನು ಕೊಂದ ಮನುಷ್ಯನ ಸೇಡು ತೀರಿಸಿಕೊಳ್ಳುವ ಪ್ರಬಲವಾದ ಇಚ್ಛೆಯಾಗದೆ ಆ ಮುದುಕನು ಇಷ್ಟು ಕಷ್ಟ ಪಟ್ಟಿರಲಿಕ್ಕಿಲ್ಲ. ಉಳಿದ ಅಕ್ಷರಗಳನ್ನು ಬರೆಯುವ ಪೂರ್ವದಲ್ಲಿಯೇ ತನಗೆ ಮರಣ ಬಂದದ್ದನ್ನು ಕಂಡಂತೂ ಅವನು ಎಷ್ಟು ದುಃಖಪಟ್ಟನೋ ದೇವರೇ ಬಲ್ಲ!

ಒಳ್ಳೇದು, ದುಃಖವಾಯಿತೆನ್ನಬೇಕೇ? ಅವನ ಮುಖಮುದ್ರೆಯು ಶಾಂತವಾದದ್ದೂ, ಆನಂದವುಳ್ಳದ್ದೂ ಇತ್ತು. ಆತನಿಗೆ ಉಂಟಾದ ಗಾಯವು ಕುತ್ತಿಗೆಯ ಕೆಳಗೆ ಎದೆಯ ಮೇಲೆ ಇತ್ತು. ಅದರ ಆಕಾರದಿಂದ ಅದು ಕಠಾರಿಯಿಂದ (ಜಂಬಿಯದಿಂದ) ಮಾಡಲ್ಪಟ್ಟಿರುವದೆಂತಲೂ, ಅದರ ಯಾವತ್ತೂ ಲಕ್ಷಣಗಳಿಂದ, ಹೊಡತಬಿದ್ದಕೂಡಲೆ ಅವನ ಪ್ರಾಣಹೋಯಿತೆಂತಲೂ ಸ್ಪಷ್ಟವಾಗಿ ಕಾಣುತ್ತಿತ್ತು. ಅಂದಮೇಲೆ ಆ ಮುದುಕನು ಈ ಅಕ್ಷರಗಳನ್ನು ಹೇಗೆ ಬರೆದನು? ಈ ಎರಡು ಪರಸ್ಪರ ವಿರುದ್ಧವಾದ ಸಂಗತಿಗಳಿಂದ ಗಣಪತರಾಯನ ಮನಸ್ಸು ಭ್ರಾಂತವಾಯಿತು. ಹುಟ್ಟಿದ ಮೇಲೆ ಈ ಪ್ರಕಾರದ ಸ್ಥಿತಿಯು ಅವನಿಗೆ ಆಗಿದ್ದಿಲ್ಲ.

ಇಷ್ಟಾದರೂ ಗಣಪತರಾಯನು ಪ್ರೇತ ಪರೀಕ್ಷೆಯ ಕೆಲಸವನ್ನು ಬಿಟ್ಟಿದ್ದಿಲ್ಲ. ಹೆಣದ ಎರಡೂ ಕೈಗಳು ಸೆಟೆದು ಬಿದ್ದಿದ್ದವು. ಅವುಗಳನ್ನು ಸರೀಕ್ಷಿಸಲು, ಬಲಗೈಯು ತೀರ ಸ್ವಚ್ಛವಾಗಿದ್ದು, ಅದರ ಮೇಲೆ ತುಸುವಾದರೂ ರಕ್ತದ ಕಲೆಯು ಕಾಣುತ್ತಿದ್ದಿಲ್ಲ. ಆದರೆ ಎಡಗೈಯು ಹಾಗಿದ್ದಿಲ್ಲ. ಅದರ ತರ್ಜನೀ ಬೆರಳು ರಕ್ತಮಯವಾಗಿತ್ತು. ಅದನ್ನು ಕಂಡು ಗಣಪತ

ರಾಯನು—ಓಹೋ! ಇದೇನಾಶ್ಚರ್ಯವು!! ಈ ಮುದುಕನು ' ವಿಶ್ವಾಸ ' ಈ ಅಕ್ಷರಗಳನ್ನು ಎಡಗೈಯಿಂದ ಬರೆದಿರಬಹುದೋ? ಛೀ ಛೀ! ಇದು ಅಸಂಭವನೀಯವಾದ ಸಂಗತಿಯು. ಭಯಂಕರವಾದ ಗಾಯವಾಗಿರಲು, ಅದರ ವೇದನೆಯಿಂದ ಮರಣೋನ್ಮುಖನಾಗಿ ಬಳಲುವ ಮನುಷ್ಯನು ಎಡಗೈಯಿಂದ ಇಂಥ ಸುವಾಚ್ಯ ಅಕ್ಷರಗಳನ್ನು ಬರೆಯುವದುಂಟೇ? ಎಂದು ಅಂದನು.

ಈ ಪ್ರಕಾರ ಗಣಪತರಾಯನು ಮನಸ್ಸಿನಲ್ಲಿಯೇ ವಿಚಾರಿಸುತ್ತಿರಲು, ' ಓಹೋ ಇದೇನಾಶ್ಚರ್ಯವು!! ಎಂಬ ಶಬ್ದಗಳು ಅವನಿಗೆ ತಿಳಿಯದೇ ಅವನ ಬಾಯಿಂದ ಹೊರಟವು. ಕೂಡಲೆ ಎಲ್ಲರೂ ಅವನನ್ನೇ ನೋಡಹತ್ತಿದರು.

ಮುರಾರಿಪಂತ—ಗಣಪತರಾವ, ಅದೇನಾಶ್ಚರ್ಯವು?

ಈ ಕಾಲಕ್ಕೆ ಗಣಪತರಾಯನ ಮನಸ್ಸು ಗಡಬಡಿಸಿ ಹೋದದ್ದರಿಂದ ಮುರಾರಿಪಂತನಿಗೆ ಉತ್ತರ ಕೊಡಬೇಕೆಂದರೆ ಅವನ ಬಾಯಿಂದ ಶಬ್ದಗಳೇ ಹೊರಡದಂತಾದವು. ಅದರಿಂದ ಅವನು ಸುಮ್ಮನೆ ಹೆಣದ ಎಡಗೈ ಬೆರಳುಗಳನ್ನು ತನ್ನ ಕೈಬೆರಳಿನಿಂದ ತೋರಿಸಿದನು. ಮುರಾರಿಪಂತನು ಪ್ರೇತದ ಎರಡೂ ಕೈಗಳನ್ನು ನೋಡಲು, ಗಣಪತರಾಯನಿಗೆ ಆಶ್ಚರ್ಯವಾದ ಸಂಗತಿಯು ತಟ್ಟನೆ ಅವನ ಮನಸ್ಸಿನಲ್ಲಿ ಬಂದಿತು. ಕೂಡಲೆ ಅವನು ಅದನ್ನು ಇನಸ್ಪೆಕ್ಟರ ಸಾಹೇಬರಿಗೆ ತಿಳಿಸಿ ಹೇಳಿದನು. ಮತ್ತು ಈ ಅಕ್ಷರಗಳು ನಿಶ್ಚಯವಾಗಿ ಮುದುಕನಿಂದ ಬರೆಯಲ್ಪಟ್ಟವುಗಳಲ್ಲ " ವೆಂದು ಅಂದನು.

ಈ ಶಬ್ದಗಳನ್ನು ಕೇಳಿದಕೂಡಲೆ ಮ್ಯಾಜಿಸ್ಟ್ರೇಟನೂ, ಇನಸ್ಪೆಕ್ಟರನೂ ಮುರಾರಿಪಂತನನ್ನು ಸಾಶಂಕ ಮುದ್ರೆಯಿಂದ ನೋಡಹತ್ತಿದರು. ಆಗ ಅವನು ಪ್ರೇತದ ಎಡಗೈ ಬೆರಳುಗಳನ್ನು ತೋರಿಸಿ ತನಗೆ ಬಂದ ಸಂಶಯವನ್ನು ಪುನಃ ಹೇಳಿದನು.

ಅದಕ್ಕೆ ಇನಸ್ಪೆಕ್ಟರ ಸಾಹೇಬರು ಖಿನ್ನರಾಗಿ—ಓಹೋ, ಈ ಸಂಗತಿಯು ನನ್ನ ಮನಸ್ಸಿನಲ್ಲಿ ಯಾಕೆ ಬಂದಿರಲಿಕ್ಕಿಲ್ಲ? ಎಂದರು.

ಆಗ ಮುರಾರಿಪಂತನು— " ಯಾವಾಗಲೂ ಹೀಗೆಯೇ ಆಗುವದು. ಮೇಲೆ ಮೇಲೆಕಾಣುವ ಸಂಗತಿಗಳು ವಸ್ತುಸ್ಥಿತಿಯಿಂದ ತೀರ ಭಿನ್ನವಾಗಿರು

ತ್ತವೆ. ಇದು ನಮ್ಮ ಉದ್ಯೋಗದಲ್ಲಿ ಅನುಭವಕ್ಕೆ ಬಂದ ಸಂಗತಿಯಾಗಿಲ್ಲವೆ? ಕೊಲೆ ಮಾಡಿದ ಮನುಷ್ಯನು ತನ್ನ ಹೆಸರು ಬರೆದು ಹೋಗುವಷ್ಟು ಮೂರ್ಖನಿರುವದು ಅಸಂಭವವು. ಅಂದಮೇಲೆ ಮುಂದೆ ಮಾಡತಕ್ಕದ್ದೇನು! ಇದನ್ನು ತಾವೇ ವಿಚಾರಿಸತಕ್ಕದ್ದು " ಎಂದು ಅಂದನು.

ಇದನ್ನು ಕೇಳಿ ಮ್ಯಾಜಿಸ್ಟ್ರೇಟ ಸಾಹೇಬರೂ ವಿಚಾರದಲ್ಲಿ ತೊಡಗಿದರು. ಮತ್ತು ಆಶ್ಚರ್ಯಮುದ್ರೆಯಿಂದ "ಮುರಾರಿಪಂತನ ಮಾತು ಸರಿಯದೆ. ಈ ಅಕ್ಷರಗಳು ನಮ್ಮನ್ನು ಮೋಸಗೊಳಿಸಿದ್ದವು. ವಿಶ್ವಾಸರಾಯನು ಕೊಲೆ ಮಾಡಿಲ್ಲೆಂಬದು ನಿಶ್ಚಯವು; ಇದಕ್ಕೇನೂ ಸಂಶಯವಿಲ್ಲ. ಅಂದ ಮೇಲೆ ಕೊಲೆಮಾಡಿದ ಮನುಷ್ಯನು ಯಾರಿರಬಹುದು? ಮುರಾರಿಪಂತರೆ, ಇನ್ನುಮೇಲೆ ಅವನನ್ನು ಶೋಧಿಸುವ ಕೆಲಸವನ್ನು ನೀವೇ ಕೈಕೊಳ್ಳಲಿಕ್ಕೆ ಬೇಕು " ಎಂದು ಹೇಳಿದರು.

ಮ್ಯಾಜಿಸ್ಟ್ರೇಟ ಸಾಹೇಬರು ಇಷ್ಟುಮಾತಾಡಿ ಸುಮ್ಮನಾದರು. ಇಷ್ಟರಲ್ಲಿ ಒಬ್ಬ ಪೋಲೀಸ ಶಿಪಾಯಿಯು ಅಲ್ಲಿಗೆ ಬಂದು ಇನಸ್ಪೆಕ್ಟರರನ್ನು ಕುರಿತು—ಬುದ್ಧೀ, ತಮ್ಮ ಅಪ್ಪಣೆಯಂತೆ ವಿಶ್ವಾಸರಾಯನನ್ನು ಹಿಡಿದು ತಂದು ಗಿರಗಾವದ ಪೋಲೀಸ ಚೌಕಿನಲ್ಲಿ ಪ್ರತಿಬಂಧದೊಳಗೆ ಇಟ್ಟಿರುತ್ತೇವೆ. ಅವನು ತನ್ನ ಅಪರಾಧವನ್ನು ತಾನೇ ಒಪ್ಪಿಕೊಳ್ಳುತ್ತಾನೆ, ಎಂದು ಹೇಳಿದನು.

——(೦)——

೫ನೆಯ ಪ್ರಕರಣ.

## ವಿಶ್ವಾಸರಾಯನಿಗೆ ವಾರಂಟು.

ಎಡಗೈ ಬೆರಳಿಗೆ ರಕ್ತವು ಹತ್ತಿದ್ದನ್ನು ಕಂಡು ವಿಶ್ವಾಸರಾಯನು ನಿರಪರಾಧಿಯೆಂದು ಅವರೆಲ್ಲರೂ ಪೂರ್ಣವಾಗಿ ಮನಗಂಡಿದ್ದರು. ಆದರೆ ಆ ಪೋಲೀಸ ಶಿಪಾಯಿಯ ಬಾಯಿಂದ ವಿಶ್ವಾಸರಾಯನು ತಾನಾಗಿಯೇ ಅಪರಾಧವನ್ನು ಒಪ್ಪಿಕೊಳ್ಳುತ್ತಾನೆಂಬ ಸಂಗತಿಯನ್ನು ಕೇಳಿ ಅವರಿಗೆ ಬಹಳ ಆಶ್ಚರ್ಯವಾಯಿತು. ಮ್ಯಾಜಿಸ್ಟ್ರೇಟ ಇನಸ್ಪೆಕ್ಟರ ಇವರಿಗಂತೂ ವಿಭ್ರಮು

ವಾಯಿತು; ಗಣಪತರಾಯನಂತೂ ಹುಚ್ಚನಂತೆ ನೋಡುತ್ತ ನಿಂತುಕೊಂಡನು. ಇತ್ತ ಕೋಣೆಯಲ್ಲಿ ನೆರೆದ ಜನರು ವಿಶ್ವಾಸರಾಯನು ನಿರಪರಾಧಿಯೆಂದು ನಿಶ್ಚಯ ಮಾಡುತ್ತಿದ್ದರು. ಅತ್ತ ವಿಶ್ವಾಸರಾಯನು ತಾನಾಗಿಯೇ ಅಪರಾಧವನ್ನು ಒಪ್ಪಿಕೊಳ್ಳುತ್ತಿದ್ದನು. ನೋಡಿರಿ, ಇದು ಎಂಥ ಚಮತ್ಕಾರವು! ಅವರೆಲ್ಲರಿಗೆ ಇದೊಂದು ದೊಡ್ಡ ಗೂಢವಾಗಿರಲು, ಮುರಾರಿಪಂತನು ಸುದ್ದಿ ಹೇಳಬಂದ ಪೋಲೀಸ ಶಿಪಾಯಿಯನ್ನು ಕುರಿತು—"ಎಲೇ ರಾಮಾ, ಈ ಸಂಗತಿಯನ್ನು ನಿನಗೆ ಯಾರೋ ಸುಳ್ಳು ಹೇಳಿರುತ್ತಾರೆ. ಅವನ್ನೆಲ್ಲ ನೀನು ನಮ್ಮ ಮುಂದೆ ಹೇಳಿದಂತೆ ಕಾಣುತ್ತದೆ. ಅಲ್ಲವೆ?" ಎಂದು ಕೇಳಿದನು.

ಶಿಪಾಯಿ—ಬುದ್ಧೀ, ನಾನು ಈ ಸಂಗತಿಯನ್ನು ಪ್ರತಿಜ್ಞೆಮಾಡಿ ಹೇಳುತ್ತೇನೆ. ಇದರಲ್ಲಿ ಎಳ್ಳಷ್ಟೂ ಸಟೆ ಇಲ್ಲ.

ಮುರಾರಿಪಂತ—ಪ್ರತಿಜ್ಞೆಯನ್ನೇನು ಮಾಡುತ್ತೀ? ಸುಮ್ಮನಿರು, ಇದರಲ್ಲಿ ನಿನ್ನದೇನಾದರೂ ತಪ್ಪು ತಿಳಿವಳಿಕೆ ಆಗಿರಬಹುದು. ಇಲ್ಲವೆ ಗುನ್ಹೆಗಾರರನ್ನು ಬೇಗನೆ ಹಿಡಿದೆನೆಂಬ ಆತ್ಮಪೌರುಷವನ್ನು ಹೇಳಿಕೊಳ್ಳುವದರ ಸಲುವಾಗಿ ನೀನು ಸುಳ್ಳು ಹೇಳುತ್ತೀ.

ಇಲ್ಲಿಯವರೆಗೆ ಆ ಶಿಪಾಯಿಯು ಒಳ್ಳೇ ಸನ್ಮಾನಪೂರ್ವಕವಾಗಿ ವಿನಯದಿಂದ ಮಾತಾಡುತ್ತಿದ್ದನು. ಈಗ ಮಾತ್ರ ಅದು ಬದಲಾಯಿತು. ಮುರಾರಿಪಂತನ ಸಿಟ್ಟಿನ ಮಾತುಗಳನ್ನು ಕೇಳಿ ಅವನಿಗೂ ಸಿಟ್ಟುಬಂದಿತು. ಕೂಡಲೆ ಆ ಶಿಪಾಯಿಯು—ನಾನು ತೀರ ಮೂರ್ಖನೂ, ಸುಳ್ಳು ಮಾತಾಡುವವನೂ ಇದ್ದೇನೆಂದು ತಾವು ನಂಬುತ್ತೀರಾ? ನಾನು ಇದೇ ಈಗ ಹೇಳಿದ್ದು ಅಕ್ಷರಶಃ ನಿಜವಾಗಿರುತ್ತದೆ.

ಈ ಪ್ರಕಾರ ಅವರಿಬ್ಬರ ಆವೇಶಯುಕ್ತ ಭಾಷಣಗಳನ್ನು ಕೇಳಿ, ಇನ್ನು ಮೇಲೆ ಅವರ ಸಿಟ್ಟು ವಿಕೋಪಕ್ಕೆ ಹೋಗುವದೆಂದು ತಿಳಿದುಮ್ಯಾಜಿಸ್ಟ್ರೇಟನು ಮಧ್ಯಸ್ಥನಾಗಿ ಮುರಾರಿಪಂತನನ್ನು ಕುರಿತು— "ಮುರಾರಿಪಂತರೆ, ಸಮಾಧಾನವನ್ನು ತಾಳಿ ಮೊದಲು ಅವನು ಹೇಳಿದ್ದನ್ನು ಪೂರ್ಣವಾಗಿ ಕೇಳಿಕೊಳ್ಳುವಿರಷ್ಟೆ?" ಎಂದು ಅಂದನು. ಅನಂತರ ಶಿಪಾಯಿಯ ಕಡೆಗೆ ತಿರುಗಿ— "ರಾಮಾಜಿ, ವಾರಂಟು ತೆಗೆದುಕೊಂಡು ಹೋದಾಗಿನಿಂದ ಇಲ್ಲಿಯವರೆಗೆ

ಆದ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳು ನೋಡುವಾ, ಎಂದನು.

ಆಗ ಶಿಪಾಯಿಯು—ಮ್ಯಾಜಿಸ್ಟ್ರೇಟ ಸಾಹೇಬರು ತನ್ನ ಮಾತಿಗೆ ಮಾನಕೊಟ್ಟರೆಂದು ಮನಸ್ಸಿನಲ್ಲಿಯೆ ಆನಂದಬಡುತ್ತ, ಮುರಾರಿಪಂತನನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತ ಮಾತಾಡಹತ್ತಿದನು.

"ಸರಕಾರ, ಮೊದಲು ನಾನು ತಮ್ಮಿಂದ ವಾರಂಟು ತಕ್ಕೊಂಡು ಚಾಕಿಗೆ ಹೋಗಿ ಅಲ್ಲಿಯ ಜಮಾದಾರರಿಗೆ ಈ ಎಲ್ಲ ವರ್ತಮಾನವನ್ನು ತಿಳಿಸಿದೆನು. ಆಮೇಲೆ ಅವರೂ, ನಾನೂ, ಬೇರೆ ಇಬ್ಬರು ಶಿಪಾಯಿಗಳೂ ಒಟ್ಟಾಗಿ ವಿಶ್ವಾಸರಾಯನನ್ನು ಹಿಡಿಯುವದಕ್ಕಾಗಿ ಹೊರಟೆವು. ವಿಶ್ವಾಸರಾಯನ ಅಂಗಡಿಯು ಪಾಲವರೋಡದಲ್ಲಿ ಠಾಕುರದ್ವಾರದ ಹತ್ತರ ಇರುವದು. ಆ ಅಂಗಡಿಯ ಒಳಮಗ್ಗಲು ಅವನ ಮನೆಯು ಇರುವದು. ಇದನ್ನೆಲ್ಲ ತಿಳಕೊಂಡು ಅಂಗಡಿಗೆ ಹೋದೆವು. ಆಗ ವಿಶ್ವಾಸರಾಯನು ಅಂಗಡಿಯಲ್ಲಿ ಇದ್ದಿಲ್ಲ. ಅತ್ತ ಇತ್ತ ವಿಚಾರಿಸಲು, ಅಂಗಡಿಯೊಳಗಿನ ಕಾರಕೂನನು "ಅವರು ಮನೆಯೊಳಗಿರುವರೆ" ಂದು ಹೇಳಿದನು. ಕೂಡಲೆ ನಾವು ಮನೆಯನ್ನು ಹೊಕ್ಕೆವು. ಅಲ್ಲಿ ವಿಶ್ವಾಸರಾಯನು ಒಂದು ಆರಾಮಿ ಖುರ್ಚಿಯ ಮೇಲೆ ಕುಳಿತು ಚಹಾ ಕುಡಿಯುತ್ತಿದ್ದನು. ಅವನ ಹೆಂಡತಿಯು ಹತ್ತರ ನಿಂತಿದ್ದಳು. ನಾವು ಒಳಗೆ ಹೋದಕೂಡಲೆ ಅವನು ಮುಂದೆಬಂದು "ಯಾರ ಕಡೆಗೆ ಬಂದಿದ್ದೀರಿ?" ಎಂದು ನಮ್ಮನ್ನು ಕೇಳಿದನು. ಅದಕ್ಕೆ ಜಮಾದಾರ ಸಾಹೇಬರು— 'ನಿಮ್ಮನ್ನು ಹಿಡಕೊಂಡು ಹೋಗಲಿಕ್ಕೆ ಬಂದಿದ್ದೇವೆ' ಎಂದು ಹೇಳಿ, ಅವನಿಗೆ ವಾರಂಟನ್ನು ತೋರಿಸಿದರು.

ಶಿಪಾಯಿಯು ಇಷ್ಟು ವಿವರವಾಗಿ ಹೇಳುವವರೆಗೆ ಮುರಾರಿಪಂತನು ತಡೆಯುವನೇ? ಅವನು ನಡುವೆ ಬಾಯಿ ಹಾಕಿ ಆ ಶಿಪಾಯಿಗೆ—ಎಲಾ, ನಿನಗೆ ಸ್ವಲ್ಪದರಲ್ಲಿ ಹೇಳಲಿಕ್ಕೆ ಬರುವದಿಲ್ಲೇನು! ನಿನ್ನ ಪಂಚಾಂಗವನ್ನು ಬೆಳಿಸಬೇಡ, ಅಂದನು.

ಶಿಪಾಯಿಯು ಮುರಾರಿಪಂತನ ಮಾತಿನ ಕಡೆಗೆ ಲಕ್ಷಕೊಡದೆ ಹಾಗೆಯೇ ಮುಂದೆ ತನ್ನ ಉದ್ದವಾದ ವ್ಯಾಖ್ಯಾನವನ್ನು ಸಾಗಿಸಿದನು. ಅವನು ಅಂದದ್ದೇನಂದರೆ:—

ದೊರೆಗಳೇ, ಇಂದಿನವರೆಗೆ ನಾನು ಎಷ್ಟೋ ಗುಹ್ನೆಗಾರರನ್ನು ವಾರಂಟಿನಿಂದ ಹಿಡಿದಿರುತ್ತೇನೆ. ಆದರೆ ವಾರಂಟನ್ನು ಕಂಡಕೂಡಲೆ ವಿಶ್ವಾಸರಾಯನು ಹೆದರಿದಷ್ಟು ಬೇರೆ ಯಾರೂ ಹೆದರಿದ್ದು ನನ್ನ ನೆನಪಿನಲ್ಲಿ ಇಲ್ಲ. ನಮ್ಮ ಮಾತು ಕೇಳಿದಕೂಡಲೆ ವಿಶ್ವಾಸರಾಯನು—ಜಮಾದಾರ, ಇದೇನು? ನನ್ನ ಕೂಡ ನೀವು ಹಾಸ್ಯಮಾಡುವಂತೆ ಕಾಣುತ್ತದೆ, ಅಥವಾ ವಾರಂಟಿನ ಹೆಸರಿನಲ್ಲಿ ಏನಾದರೂ ತಪ್ಪು ಆಗಿರುವಂತೆ ತೋರುವದು, ಅಂದನು. ಅದಕ್ಕೆ ಜಮಾದಾರರು—ಛೇ, ಛೇ, ನಾವು ಎಂದೂ ತಪ್ಪುಮಾಡುತ್ತಿರುವದಿಲ್ಲವೆಂದು ಹೇಳಿದರು.

ಆಗ ವಿಶ್ವಾಸರಾಯನು—ಒಳ್ಳೇದು, ಹಾಗಾದರೆ ನನ್ನಿಂದ ಒದಗಿದ ಗುಹ್ನೆಯಾದರೂ ಯಾವದು? ಎಂದು ಪ್ರಶ್ನಮಾಡಲು, ಜಮಾದಾರ ಸಾಹೇಬರು—ವಿಶ್ವಾಸರಾವ, ಹೀಗೇಕೆ ಹಾರಿಸಿ ಮಾತಾಡುತ್ತೀರಿ? ನಿನ್ನೆ ನಿಮ್ಮ ಕಕ್ಕನು ಕೊಲ್ಲಲ್ಪಟ್ಟಿರುತ್ತಾನೆ, ಅವನನ್ನು ನೀವೇ ಕೊಂದಿರುವಿರೆಂಬ ನಂಬಿಗೆಯ ಪುರಾವೆಯು ದೊರೆತಿರುತ್ತದೆ.

ಜಮಾದಾರರ ಬಾಯಿಂದ "ನೀವೇ ಕೊಂದಿರುವಿರಿ" ಎಂಬ ಶಬ್ದಗಳು ಹೊರಟಾಕ್ಷಣವೇ ವಿಶ್ವಾಸರಾಯನು ಧಡಕ್ಕನೆ ತಾನುಕುಳಿತ ಖುರ್ಚಿಯ ಮೇಲೆ ಬಿದ್ದುಕೊಂಡನು. ಅವನ ಮನಸ್ಸಿನಲ್ಲಿ ಏನೋ ಮಾತಾಡಬೇಕೆಂದಿತ್ತು ಆದರೆ ಬಾಯಿಂದ ಶಬ್ದಗಳೇ ಹೊರಡಲೊಲ್ಲವು. ನಾವು ಅವನ ಕೈಹಿಡಿದು,—"ವಿಶ್ವಾಸರಾವ, ನಾವು ನಿಮಗೊಂದು ಮಾತು ಹೇಳುತ್ತೇವೆ, ಕೇಳಿರಿ. ಸದ್ಯಕ್ಕೆ ನೀವು ಗುಹ್ನೆಯನ್ನು ಒಪ್ಪಿಕೊಳ್ಳುವದೇ ಸುಲಭವಾದ ತರಣೋಪಾಯವಾಗಿರುವದು." ಎಂದು ಹೇಳಲು, ವಿಶ್ವಾಸರಾಯನು ವಿಚಿತ್ರ ದೃಷ್ಟಿಯಿಂದ ನಮ್ಮನ್ನು ನೋಡಿ—"ಒಳ್ಳೇದು, ನಾನು ಎಲ್ಲವನ್ನೂ ಒಪ್ಪಿಕೊಳ್ಳುತ್ತೇನೆ." ಅಂದನು. ನಮಗಾದರೂ ಈ ಪ್ರಕರಣವನ್ನು ಬೇಗನೆ ಮುಗಿಸಬೇಕೆಂದು ಇತ್ತೇ ಇತ್ತು. ಮತ್ತು ಹೆಚ್ಚಾಗಿ ಬೊಬ್ಬಾಟವನ್ನು ಮಾಡಬಾರದೆಂದು ಅಪ್ಪಣೆಯಾಗಿತ್ತು. ಆದರೂ ಅಷ್ಟರೊಳಗೆಯೇ ಅಲ್ಲಿ ಎಷ್ಟೋ ನಿರುದ್ಯೋಗಿಗಳ ಹಿಂಡು ನೆರೆಯಿತು. ನಾನು ವಿಶ್ವಾಸರಾಯನ ಕೈಹಿಡಿದು—ನಡೆಯಿರಿ, ಚೌಕಿನಲ್ಲಿ ಮ್ಯಾಜಿಸ್ಟ್ರೇಟರು ನಿಮ್ಮ ಹಾದಿಯನ್ನು ನೋಡುತ್ತಿರುವರು. ಅನ್ನಲು, ಅದಕ್ಕೆ ವಿಶ್ವಾಸರಾಯನು—ಒಳ್ಳೇದು, ನಡೆಯಿರಿ; ಎಂದು ಎದ್ದು

ನಿಂತನು; ಆಗ ನಮಗೆ ಬಹಳ ಸಂತೋಷವಾಯಿತು; ಆದರೆ, ಅಲ್ಲಿಯೇ ಅವನ ಹೆಂಡತಿಯು ಇದ್ದದ್ದು ನಮ್ಮ ಲಕ್ಷದಲ್ಲಿ ಬರಲಿಲ್ಲ. ನಾವು ಬಂದದ್ದನ್ನು ನೋಡಿ ಅವಳು ಒಳಗೆ ಹೋಗಿದ್ದಳು. ಮತ್ತು ಮರೆಗೆ ನಿಂತು, ನಮ್ಮ ಸಂಭಾಷಣವನ್ನು ಕೇಳುತ್ತಿದ್ದಳು. ತನ್ನ ಗಂಡನು ಹಿಂದು ಮುಂದು ನೋಡದೆ, ಹೆಚ್ಚು ಮಾತಾಡದೆ, ಗುನ್ಹೆಯನ್ನು ಒಪ್ಪಿಕೊಂಡು, ಪೋಲೀಸರ ವಶಕ್ಕೆ ಹೋಗುವದನ್ನು ಕಂಡಕೂಡಲೆ ಆಕೆಯು ಕೆರಳಿದ ಹೆಣ್ಣು ಹುಲಿಯಂತೆ ನಮ್ಮ ಮೈಮೇಲೆ ಬಂದಳು. ಮತ್ತು "ನಿಮ್ಮನ್ನು ಹೋಗಗೊಡುವದಿಲ್ಲ" ಎಂದು ಬಾಗಿಲು ಕಟ್ಟಿಕೊಂಡು ನಿಂತಳು.

ಇಂಥ ಪ್ರಸಂಗಗಳು ಮೇಲೆ ಮೇಲೆ ಬರುತ್ತಿದ್ದದ್ದರಿಂದ ನಾವು ಗಾಬರಿಯಾಗದೆ ಸಮಾಧಾನದಿಂದ ಅವಳನ್ನು ಕುರಿತು— "ತಾಯೀ, ಹೀಗೆ ಮಾಡಬೇಡಿರಿ. ಇದರಿಂದ ಕೊಂಚವಾದರೂ ಒಳಿತಾಗಲಿಕ್ಕಿಲ್ಲ" ಎಂದು ಅನೇಕ ಪ್ರಕಾರದಿಂದ ಹೇಳಿದರೂ, ಅವಳು ಬಾಗಿಲವನ್ನು ಬಿಟ್ಟು ಕದಲಲಿಲ್ಲ. ಆಕೆಯು ತನ್ನ ಗಂಡನು ನಿರಪರಾಧಿಯಾಗಿರುವನೆಂದು ಬೇಕಾದಂಥ ಆಣೆ-ಚೂರಿಗಳನ್ನು ಮಾಡಿ ಹೇಳಿದಳು. ಇಷ್ಟೇ ಅಲ್ಲ. ಅವರನ್ನು ಒಯ್ಯುವದೇ ನಿಜವಾದರೆ ನನ್ನನ್ನೂ ಅವರ ಸಂಗಡ ಒಯ್ಯಿರಿ, ಎಂದು ಅನ್ನಹತ್ತಿದಳು. ನಡುನಡುವೆ ನಮ್ಮನ್ನು ಮನಸ್ಸಿಗೆ ಬಂದಂತೆ ಬಯ್ಯುವಳು. ಕೂಡಲೆ ಗಂಡನ ಬಿಡುಗಡೆಯ ಸಲುವಾಗಿ ನಮ್ಮ ಮನಸ್ಸು ಒಲಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡುವಳು. ಈ ಪ್ರಕಾರ ಆಕೆಯು ತನ್ನ ಬೈಗಳುಗಳಿಂದಲೂ, ಸವಿನಯ ಮಾತುಗಳಿಂದಲೂ ಏನೂ ಪ್ರಯೋಜನವಾಗುವದಿಲ್ಲೆಂಬದನ್ನು ಅರಿತು, ಬಾಗಿಲವನ್ನು ಬಿಟ್ಟು, ತನ್ನ ಗಂಡನ ಕಡೆಗೆ ನೋಡಿ, ಅಂದದ್ದೇನಂದರೆ— "ಇವರು ಅನ್ನುವಷ್ಟು ಭಯಂಕರವಾದ ಕಾರ್ಯವು ನಿಜವಾಗಿಯೇ ನಿಮ್ಮಿಂದ ಘಟಿಸಿರುವದೇನು?" ಈ ಕಾಲದ ಅವಳ ದೀನವಾದ ಮುಖಮುದ್ರೆಯನ್ನು ಕಂಡು, ನಮ್ಮ ಅಂತಃಕರಣವು ಕರಗಿ ನೀರಾಯಿತು; ಆದರೆ ಆ ಪಾಷಾಣ ಹೃದಯದ ವಿಶ್ವಾಸರಾಯನ ಮನಸ್ಸಿನಮೇಲೆ ತುಸುವಾದರೂ ಅದರಪರಿಣಾಮವಾಗಲಿಲ್ಲ. ಕೂಡಲೆ ಅವನು ಆ ಪಾಪ, ಬಡಹೆಂಡತಿಯನ್ನು ಅಲ್ಲಿಯೇ ಭರದಿಂದ ನೂಕಿಬಿಟ್ಟನು. ಆಗ ಅವಳು ಅಂಗಳದಲ್ಲಿಯೇ ನಿಶ್ಚೇಷ್ಟಿತಳಾಗಿ ಬಿದ್ದುಕೊಂಡಳು. ನಾವಾದರೂ ಈ ಸಂಧಿಯನ್ನು ಸಾಧಿಸಿ

ವಿಶ್ವಾಸರಾಯನನ್ನು ಹಿಡಿದುಕೊಂಡು ಅಂಗಡಿಯಿಂದ ಹೊರಬಿದ್ದೆವು. ಕೂಡಲೆ ವಿಶ್ವಾಸರಾಯನ ಒಂದು ದೊಡ್ಡ ನಾಯಿಯು ನಮ್ಮ ಮೈಮೇಲೆ ಬಂತು; ಆದರೆ ವಿಶ್ವಾಸರಾಯನು ಅದನ್ನು ಬೆದರಿಸಿದ್ದರಿಂದ ಆಬಡ ಪ್ರಾಣಿಯು ಸುಮ್ಮನೆ ತನ್ನ ಸ್ಥಳದಲ್ಲಿ ಹೋಗಿ ಕುಳಿತುಕೊಂಡಿತು. ತರುವಾಯ ನಾವು ವಿಶ್ವಾಸರಾಯನನ್ನು ಒಂದು ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಚೌಕಿಯಕಡೆಗೆ ಹೊರಟೆವು. ದಾರಿಯಲ್ಲಿ ವಿಶ್ವಾಸರಾಯನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದೆವು. ಆದರೆ ಅವನು ಒಂದಕ್ಕೂ ಉತ್ತರವನ್ನು ಕೊಡಲಿಲ್ಲ. ನಾವು ಗಿರಗಾವ ಪೋಲೀಸ ಚೌಕಿಗೆ ಬಂದು ಮುಟ್ಟಿ, ವಿಶ್ವಾಸರಾಯನನ್ನು ಒಂದು ಕೋಣೆಯಲ್ಲಿ ಹಾಕಿದೆವು. ಆಗ ಮಾತ್ರ ಅವನ ಬಾಯಿಂದ— “ ಓಹೋ! ನಾನು ಏನು ಮಾಡಿದೆನು? ” ಎಂಬ ಶಬ್ದಗಳು ತಮ್ಮಿಂದ ತಾವೇ ಹೊರಬಿದ್ದವು. ಪುನಃ ನಾವು ಅವನ ಬಳಿಗೆ ಹೋಗಿ—ಖೂನು ಮಾಡಿದ್ದನ್ನು ನೀವು ಒಪ್ಪಿಕೊಳ್ಳುವಿರಷ್ಟೇ? ಎಂದು ಕೇಳಲು ವಿಶ್ವಾಸರಾಯನು— “ ಅಹುದು; ಆದರೆ ಇನ್ನು ಕ್ಷಣಹೊತ್ತು ನನ್ನನ್ನು ಏಕಾಂತದಲ್ಲಿ ಬಿಟ್ಟುಬಿಡಿರಿ ” ಎಂದು ಉತ್ತರಕೊಟ್ಟನು. ಹಾಗೆಯೇ ಆಗಲೆಂದು ನಾವು ಆ ಕೋಣೆಯ ಬಾಗಿಲಿಗೆ ಕೀಲೀ ಹಾಕಿದೆವು; ಆದರೆ ವಿಶ್ವಾಸರಾಯನು ಒಳಗೆ ಜೀವಕೊಡುವ ಪ್ರಯತ್ನ ಮಾಡಿಯಾನೆಂಬ ಸಂಶಯದಿಂದ ಅವನ ಮೇಲೆ ಲಕ್ಷ್ಯವಿಡುವದಕ್ಕಾಗಿ, ಒಬ್ಬ ಬುದ್ಧಿವಂತನಾದ ಶಿಪಾಯಿಯನ್ನು ನಿಯಮಿಸಿದ್ದೇವೆ. ಇಷ್ಟೆಲ್ಲ ಕೆಲಸವಾದ ಮೇಲೆ ಸರಕಾರಕ್ಕೆ ವಿದಿತಪಡಿಸುವದಕ್ಕಾಗಿ ನಾನು ಇತ್ತಕಡೆಗೆ ಬಂದಿರುವೆನು, ಎಂದನು.

ಈ ಪ್ರಕಾರ ಶಿಪಾಯಿಯ ಮಾತು ಮುಗಿಯಲು, ಇನಸ್ಪೆಕ್ಟರರು— ಶಾಬಾಸ್, ಬಹಳ ಒಳ್ಳೇದು ಮಾಡಿದಿರಿ, ಎಂದರು. ಮ್ಯಾಜಿಸ್ಟ್ರೇಟಸಾಹೇಬರಾದರೂ ಈ ಎಲ್ಲ ಸಂಗತಿಗಳನ್ನು ಕೇಳಿ—ಇನ್ನು ವಿಶ್ವಾಸರಾಯನ ಅಪರಾಧದ ಬಗ್ಗೆ ಸಂಶಯಗೊಳ್ಳುವ ಕಾರಣವಿಲ್ಲವೆಂದು ಅಂದರು.

ಗಣಪತರಾಯನು ಇದನ್ನೆಲ್ಲ ಕೇಳಿ ಆಶ್ಚರ್ಯಚಕಿತನಾದನು. ಅವನ ಮನಸ್ಸಿಗೆ ಈ ಸಂಗತಿಯು ನಿಜವಾಗಿ ತೋರದ್ದರಿಂದ ಅವನು ನಡುವೇ ಮಾತಾಡಬೇಕೆಂದು ಮಾಡಿದ್ದನು; ಆದರೆ ಆ ಕೆಲಸವನ್ನು ಮುರಾರಿಪಂತನೇ ಮಾಡಿದನು. ಹೇಗೆಂದರೆ—

ಇಲ್ಲಿಯವರೆಗೆ ಆದದ್ದೆಲ್ಲ ಸರಿಯಾಯಿತು; ಆದರೆ ವಿಶ್ವಾಸರಾಯನೇ ಖೂನು ಮಾಡಿರುವನೆಂದು ತಿಳಿವರೆ, ಈ ಅಕ್ಷರಗಳು ಅವನಿಂದಲೇ ಬರೆಯಲ್ಪಟ್ಟಿರುವವೆಂಬ ಮಾತಿಗೆ ತಾವು ಒಪ್ಪಿಕೊಳ್ಳಬೇಕಾಗುತ್ತದೆ. ನನ್ನ ಮತದಿಂದಂತೂ ಈ ಮಾತು ಅಸಂಭವನೀಯವಾಗಿ ತೋರುತ್ತದೆ.

" ಆ! ಇದರಲ್ಲೇನೂ ಅರ್ಥವಿಲ್ಲ; ವಿಶ್ವಾಸರಾಯನು ತಾನಾಗಿಯೇ ತನ್ನ ಅಪರಾಧವನ್ನು ಒಪ್ಪಿಕೊಳ್ಳುತ್ತಿರಲು, ಇನ್ನು ಆ ಸಂಬಂಧದಿಂದ ಹೆಚ್ಚಿಗೆ ವಿಚಾರಮಾಡುವ ಕಾರಣವೇ ಉಳಿಯಲಿಲ್ಲ. ಖಟ್ಲೆಯ ವಿಚಾರಣೆಯ ಕಾಲಕ್ಕೆ ಎಲ್ಲವೂ ತನ್ನಿಂದ ತಾನೇ ಬೈಲಿಗೆ ಬರುವದು, " ಎಂದು ಇನಸ್ಪೆಕ್ಟರ ಸಾಹೇಬರವರು ಅನ್ನಹತ್ತಿದರು. ಮುರಾರಿಪಂತನ ಮಾತಿನಿಂದ ಮ್ಯಾಜಿಸ್ಟ್ರೇಟ ಸಾಹೇಬರು ಮಾತ್ರ ವಿಚಾರದಲ್ಲಿ ಬಿದ್ದರು. ಮತ್ತು ತುಸು ಹೊತ್ತು ಏನೋ ವಿಚಾರಿಸಿ—"ಒಳ್ಳೇದು, ನಾನು ಈಗಲೇ ಚಾಕಿಗೆ ಹೋಗಿ ವಿಶ್ವಾಸರಾಯನ ಜವಾಬು ತೆಗೆದುಕೊಳ್ಳುತ್ತೇನೆ. " ಎಂದು ಹೇಳಿ, ಹೊರಟು ಹೋಗುವಾಗ, ಅವರು ಇನಸ್ಪೆಕ್ಟರ ಸಾಹೇಬರಿಗೆ—ಡಾಕ್ಟರ ಸಾಹೇಬರು ಬಂದು ಪ್ರೇತಪರೀಕ್ಷೆಯನ್ನು ಮಾಡಿಹೋಗುವವರೆಗೆ ನೀವು ಇಲ್ಲಿಯೇ ಇರ್ರಿ, ಎಂದು ಹೇಳಿ ಹೋದರು. ಅವರ ಸಂಗಡ ಅವರ ಕಾರಕೂನನೂ, ಸುದ್ದಿ ಹೇಳಬಂದ ಶಿಪಾಯಿಯೂ ಹೋದರು. ಆಗ ಇನಸ್ಪೆಕ್ಟರ ಸಾಹೇಬರು ಅಸಮಾಧಾನದಿಂದ, ಇನ್ನು ಡಾಕ್ಟರ ಸಾಹೇಬರು ಯಾವಾಗ ಬರುವರೋ, ಏನೋ? ಎಂದು ಮೋರೆ ಗಂಟುಹಾಕಿ ಗುಣುಗುಟ್ಟುತ್ತ, ಮತ್ತು ಕೋಣೆಯೊಳಗಿನ ಕಪಾಟು–ಪೆಟ್ಟಿಗೆ–ಮೇಜಿನ ಡ್ರಾಅರ ಮೊದಲಾದವುಗಳಿ ಕೀಲೀ ಹಾಕಿ ಮೋಹರು ಮಾಡಹತ್ತಿದರು. ಗಣಪತರಾಯರೂ ಮುರಾರಿಪಂತರೂ ಸುಮ್ಮನೆ ಕುಳಿತುಕೊಂಡಿದ್ದರು. ಅವರಿಬ್ಬರ ಮನಸ್ಸಿನಲ್ಲಿ ಒಂದೇ ಪ್ರಕಾರದ ವಿಚಾರಗಳು ನಡೆದಿದ್ದವು. ಮುರಾರಿಪಂತನು ಒಮ್ಮೆಲೇ ಗಣಪತರಾಯನ ಕಡೆಗೆ ತಿರುಗಲು, ಅವರ ಸಂಭಾಷಣವು ಕೆಳಗೆ ಬರೆದಂತೆ ಆಯಿತು.

ಮುರಾರಿಪಂತ—ಗಣಪತರಾಯರೆ, ಆ ಅಕ್ಷರಗಳು ಮುದುಕನಿಂದಲೇ ಬರೆಯಲ್ಪಟ್ಟಿರಬೇಕಲ್ಲವೆ?

ಗಣಪತರಾಯ—ಛೇ! ಛೇ! ಎಡಗೈಯಿಂದ ಇಷ್ಟು ಸುವಾಚ್ಯ ಅಕ್ಷರಗಳನ್ನು ಬರೆಯುವರೇ? ಈ ಮಾತು ಸಂಭವಿಸುವದಾದರೂ ಹೇಗೆ? ಇತ

ಲ್ಲವೆ ಆ ಮುದುಕನು ಗಾಯವಾದಕೂಡಲೆ ಮರಣಹೊಂದಿರಲಿಕ್ಕೆಬೇಕು.

ಮುರಾರಿಪಂತ—ಈ ವಿಷಯದಲ್ಲಿ ನಿಮಗೆ ಪೂರ್ಣ ಮನವರಿಕೆಯಾಗಿ ರುವದೋ ?

ಗಣಪತರಾಯ—ಗಾಯದ ಸ್ವರೂಪವನ್ನು ನೋಡಿದರಂತು ನನಗೆ ಹಾಗೆಯೇ ಕಾಣುತ್ತದೆ. ಅಷ್ಟು ದೂರವೇಕೆ ? ಈಗ ಡಾಕ್ಟರರು ಬರುವರ ಲ್ಲವೇ ? ಅವರು ಏನು ಹೇಳುತ್ತಾರೋ, ನೋಡುವಾ. ಈ ಕೆಲಸದಲ್ಲ ನಾನು ಇನ್ನೂ ಹೊಸಬಸಿರುತ್ತೇನೆ. ಆದ್ದರಿಂದ ಅವರ ಅಭಿಪ್ರಾಯವು ನನ ಗಿಂತಲೂ ಹೆಚ್ಚು ಗ್ರಾಹ್ಯವಾದದ್ದು.

ಈ ಮಾತನ್ನು ಕೇಳಿ ಮುರಾರಿಪಂತನು ಮತ್ತೆ ವಿಚಾರದಲ್ಲ ತೊಡಗಿ ದನು. ಇದರಲ್ಲಿ ಏನೋ ಗೂಢವಿದೆ. ಇದನ್ನು ಚೆನ್ನಾಗಿ ಶೋಧಮಾಡ ಲಿಕ್ಕೆ ಬೇಕು. ಮೊದಲು ನಾವು ಈ ಮುದುಕನ ಅಡಿಗೆಯವನ ಜವಾ ಬನ್ನು ತೆಗೆದುಕೊಳ್ಳೋಣ; ಎಂದು ಅವನು ಮನಸ್ಸಿನಲ್ಲ ಯೋಚಿಸಿ, ಅಲ್ಲಿದ್ದ ಒಬ್ಬ ಶಿಪಾಯಿಗೆ ಹೇಳಿ ಆ ಅಡಿಗೆಯವನನ್ನು ಕರೆಕಳುಹಿದನು.

——— ( ೦ ) ———

೬ನೆಯ ಪ್ರಕರಣ.

## ಕೊಲೆಪಟ್ಟವನ ಪೂರ್ವವೃತ್ತಾಂತ

ಮುದುಕನ ಅಡಿಗೆಯವನು ಬರುವವರೆಗೆ ಮುರಾರಿಪಂತನು ಆ ಕೋಣೆಯನ್ನು ವಿಶೇಷರೀತಿಯಿಂದ ಶೋಧಿಸಹತ್ತಿದನು. ಅವನು ಎಲ್ಲಕ್ಕೂ ಮೊದಲು ಬಾಗಿಲದ ಚಿಲಕಕೊಂಡಿಗಳನ್ನು ಪರೀಕ್ಷಿಸಿದನು. ಅವು ಮುರಿ ದಂತೆ ಕಾಣಲಿಲ್ಲ. ಇದರಿಂದ, ಅವನಿಗೆ ಮುದುಕನು ಬಾಗಿಲವನ್ನು ಇಕ್ಕಿ ಚಿಲಕಹಾಕಿಕೊಂಡು ಮಲಗಿದಮೇಲೆ, ಕೊಲೆಮಾಡಿದ ಮನುಷ್ಯನು ಬಾಗಿಲಮುರಿದು ಒಳಗೆ ಬರದೆ, ಮುದುಕನು ಎಚ್ಚರದಿಂದ ಇದ್ದಾ ಗಲೇ ಅವನು ಬಂದಿರಬಹುದೆಂದನು. ಮತ್ತು ಆ ಮನುಷ್ಯನು ಮುದು

ಕನ ಪರಿಚಯದವನಾಗಿರಬಹುದೆಂದು ತರ್ಕಿಸಿದನು. ಮುರಾರಿಪಂತನು ಇತ್ತ ಚಿಲಕಕೊಂಡಿಗಳನ್ನು ಪರೀಕ್ಷಿಸುವಕಾಲಕ್ಕೆ, ಅತ್ತ ಗಣಪತರಾಯನು ಆ ಮುದುಕನ ಹಾಸಿಗೆಯ ಹತ್ತರ ಬಿದ್ದಿದ್ದ ಬೂಚನ್ನು ತೆಗೆದುಕೊಂಡು ದಿಟ್ಟಿಸಿ ನೋಡುತ್ತಿದ್ದನು. ಆ ಬೂಚಿನ ಮೇಲೆ ಹಸರು ಅರಗು ಹಚ್ಚಿ ಮೊಹರು ಮಾಡಿದ್ದು ಕಾಣುತ್ತಿತ್ತು; ಆದರೆ ಅವರ ಮೇಲಿನಅಕ್ಷರಗಳು ಮಾತ್ರ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಬೂಚಿನ ಇಳಿಜಾರಾದ ಮೈಯಲ್ಲಿ ಒಂದು ಅಡ್ಡ ಕಚ್ಚುಕಾಣುತ್ತಿತ್ತು. ಅದನ್ನು ನೋಡಿದರೆ ಅದುಚೂರಿಯುಅಥವಾ ಕಠಾರಿಯ ಚೂಪಾದಮೊನೆಯನ್ನುಚುಚ್ಚಿ ಮಾಡಲ್ಪಟ್ಟಂತೆ ಸಂಶಯಬರುತ್ತಿತ್ತು. ಗಣಪತರಾಯನು ಕೂಡಲೆ ಅದನ್ನು ಆತನಿಗೆ ತೋರಿಸಿದನು. ಅದನ್ನು ನೋಡಿದ ಕೂಡಲೆ ಮುರಾರಿಪಂತನಿಗೆ ಬಹಳ ಆನಂದವಾದಂತೆ ಕಂಡಿತು. ಯಾಕಂದರೆ, ಆ ಆನಂದದ ಭರದಲ್ಲಿ ಅವನ ಬಾಯಿಂದ ಮುಂದಿನ ಉದ್ಗಾರಗಳು ಹೊರಟವು.

"ನಿಜವಾಗಿ ಈ ಬೂಚಿನಿಂದಲೇ ನಮಗೇನಾದರೂ ಈ ಖೂನಿನಶೋಧವು ಎಳಿಹತ್ತುವಂತೆ ಕಾಣುತ್ತದೆ. ಇದನ್ನು ಇಲ್ಲಿ ಖೂನೀಮನುಷ್ಯನೇ ಚಲ್ಲಿರಬಹುದೆಂದು ತೋರುತ್ತದೆ. ಖೂನು ಮಾಡುವದರ ಸಲುವಾಗಿ ಸಂಗಡ ತಂದ ಆಯುಧದ ಹದನಾದ ಮೊನೆಯು ತನಗೆ ತಗಲಬಾರದೆಂತಲೂ ಅಥವಾ ಬೇರೆ ಎಲ್ಲಿಯಾದರೂ ತಗಲಿ ಮೊಂಡವಾಗಬಾರದೆಂತಲೂ ಅವನು ಅದರ ತುದಿಯನ್ನು ಈ ಬೂಚಿನಲ್ಲಿ ಚುಚ್ಚಿಕೊಂಡು ತಂದಿರಬಹುದು. ಮತ್ತು ಈ ಬೂಚಿನ ಮೇಲೆ ಬಿದ್ದ ಕಚ್ಚಿನಿಂದ ಆ ಆಯುಧವು, 'ಜಂಬಿಯು'ವಾಗಲಿ, 'ಖಂಜೀರ'ವಾಗಲಿ ಇರಬಹುದೆಂಬಂತೆ ಕಾಣುತ್ತದೆ. ಇದರಲ್ಲಿ ಸಂಶಯು ವಿಲ್ಲ. ಇನ್ನು ಆ ಖೂನೀಮನುಷ್ಯನು ಎಲ್ಲಿ ಅಡಗುವನೋ, ನೋಡುತ್ತೇನೆ."

ಇನಸ್ಪೆಕ್ಟರ ಸಾಹೇಬರು ಇನ್ನೂ ಮೊಹರುಮಾಡುವ ಕೆಲಸದಲ್ಲಿಯೇ ತೊಡಗಿದ್ದರು. ಅಷ್ಟರಲ್ಲಿ ಮುದುಕನ ಅಡಿಗೆಯವನು ಮೆಲ್ಲಗೆ ಒಳಗೆ ಬಂದನು. ಆ ಪ್ರಾಣಿಯು ಬೆದರಿ ಹೋಗಿದ್ದನು. ಅವನನ್ನು ನೋಡಿ ಮುರಾರಿಪಂತನು—ಎಲಾ, ನಿನ್ನ ಯಜಮಾನನನ್ನು ಯಾರೋ ಕೊಂದುಹಾಕಿದ್ದಾರೆ. ಕೊಲೆಮಾಡಿದ ಮನುಷ್ಯನನ್ನು ಶೋಧನಾಪತ್ತೆ

ದದೆ. ಈ ವಿಷಯದಲ್ಲಿ ನೀನು ಬಲ್ಲ ಎಲ್ಲ ಸಂಗತಿಗಳನ್ನು ಹೇಳಬೇಕು. ನಾನು ಕೇಳಿದ ಪ್ರಶ್ನಗಳಿಗೆ ಅಂಜದೆ ನಿನಗೆ ಗೊತ್ತಿದ್ದಷ್ಟುಟ್ಟಿಗೆ ಉತ್ತರ ವನ್ನು ಕೊಡು. ಸುಳ್ಳು ಹೇಳಿದೆಯಂದರೆ ಕಠಿನವಾದೀತು. ಇದನ್ನು ಲಕ್ಷದಲ್ಲಿಟ್ಟು ಹೇಳು.

ಅಡಿಗೆಯವ—ಕೇಳಿರಿ,ಬುದ್ಧೀ, ನಾನು ನಿಜವಾದ ಸಂಗತಿಯನ್ನೇ ಹೇಳುತ್ತೇನೆ. ನಾವು ಬಡವರು; ಅನ್ನಕ್ಕೆ ಪರರನ್ನು ಆಶ್ರಯಿಸಿದವರು; ಸುಳ್ಳು ಹೇಳಿ ಏನು ಸುರಕೊಳ್ಳಬೇಕು.

ಮುರಾರಿಪಂತ( ಒಳ್ಳೇ ಗಂಭೀರ ಮುದ್ರೆಯಿಂದ)— ಒಳ್ಳೇದು, ನಿನ್ನ ಯಜಮಾನನ ವಿಷಯವಾಗಿ ನಿನಗೆ ಏನು ಗೊತ್ತದೆ, ಅದನ್ನೆಲ್ಲ ಹೇಳು.

ಅಡಿಗೆಯವ—ನಮ್ಮ ಯಜಮಾನನನ್ನು ವಿಠೋಜಿರಾವ ಮೋಹಿತೆ, ಎಂದು ಕರೆಯುತ್ತಾರೆ. ಇವರು ಮೊದಲು ಕೊಲ್ಹಾಪುರದವರು. ಸುಮಾರು ೨೫ ವರ್ಷಗಳ ಕೆಳಗೆ ಇವರ ಹೆಂಡತಿಯು ತೀರಿಕೊಂಡಳು. ಇವರಿಗೆ ಮಕ್ಕಳು—ಮರಿಗಳು ಯಾರೂ ಇದ್ದಿಲ್ಲ. ಆದರಿಂದ ಇವರು ಇದ್ದ ಊರು ಬಿಟ್ಟುಕೊಟ್ಟು ಈ ಮುಂಬಯಿಗೆ ಬಂದರು. ಇಲ್ಲಿ ಮೋತೀ ಬಾಜಾರ ದಲ್ಲಿ ಲಖಮೀಶೇಟ ಎಂಬವರ ಅಂಗಡಿಯ ಮೇಲೆ ಕಾರಕೂನರಾಗಿದ್ದರು. ನಾನಾದರೂ ಅದೇ ಊರವನು; ಹೊಟ್ಟೆಯಸಲುವಾಗಿ ತಿರುಗುತ್ತ ಇಲ್ಲಿಗೆ ಬಂದೆನು. ಇಲ್ಲಿ ನಾನು ವಿಠೋಜಿರಾಯರನ್ನು ಕಾಣಲು, ಅವರು ತಮ್ಮಲ್ಲಿ ನನ್ನನ್ನು ಅಡಿಗೆ ಮಾಡಲಿಕ್ಕೆ ಇಟ್ಟುಕೊಂಡರು. ಅಲ್ಲಿಯವ ರೆಗೆ ಅವರು ನಂಬರ ಮನೆಯಲ್ಲಿ ಉಣ್ಣುತ್ತಿದ್ದರು. ಹೀಗೆ ೧೫—೧೬ ವರ್ಷ ಗಳು ಸಂದಮೇಲೆ ಲಖಮೀಶೇಟರು ದಿವಾಳೀ ತೆಗೆದರು. ಆದರಿಂದ ವಿಠೋ ಜಿರಾಯರ ಕೆಲಸವು ಸಹಜವಾಗಿಯೇ ಹೋಯಿತು. ಆದರೂ ಅವರು ಕೈಯೊಳಗೆ ಬಹಳ ಹಣ ಮಾಡಿಕೊಂಡಿದ್ದರು. ಅಲ್ಲಿಂದ ಅವರು ಈ ವಠಾ ರಕ್ಕೆ ಬಂದು ವಸ್ತಿ ಮಾಡಿದರು. ಇಷ್ಟರೊಳಗೆ ಗೋವಿಂದರಾಯನೆಂಬ ಒಬ್ಬ ಅವರ ತಮ್ಮನು ಠಾಣೆಯ ಮುನಸುಫ ಕೋರ್ಟಿನಲ್ಲಿ ಶಿರಸ್ತೇ ದಾರನಿರುತ್ತಿದ್ದನು. ಆಗ ಅವನು ತೀರಿಕೊಂಡನು. ಆದರಿಂದ ನನ್ನಯಜ ಮಾನರು ಅವನ ಹೆಂಡತಿಯನ್ನೂ ವಿಶ್ವಾಸರಾಯನೆಂಬ ಅವನ ಮಗ

ಸನ್ನೂ ತಮ್ಮ ಹತ್ತರ ತಂದು ಇಟ್ಟುಕೊಂಡರು. ತುಸು ದಿವಸಗಳಲ್ಲಿ ವಿಶ್ವಾಸರಾಯನ ತಾಯಿಯು ತೀರಿಕೊಂಡಳು. ವಿಶ್ವಾಸರಾಯನು ಸಾಲೆಗೆ ಹೋಗುತ್ತಿದ್ದನು; ಆದರೆ ಅಭ್ಯಾಸದ ಕಡೆಗೆ ಅವನ ಲಕ್ಷ್ಯ ಇದ್ದಿಲ್ಲ. ಇದನ್ನು ಕಂಡು ನನ್ನ ಯಜಮಾನರು ಅವನಿಗೆ ಒಬ್ಬ ಪಾರಸೀ ವ್ಯಾಪಾರಸ್ಥನ ಬಳಿಯಲ್ಲಿ ಒಂದು ಉದ್ಯೋಗವನ್ನು ಕೊಡಿಸಿದರು. ಇದೇ ವತಾರದಲ್ಲಿ ಆ ಕಾಲಕ್ಕೆ ಮಲ್ಹಾರಿರಾವ ಸಿಂದೆ ಎಂಬ ಒಬ್ಬ ಗೃಹಸ್ಥನು ಇವರ ನೆರೆಯಲ್ಲಿರುತ್ತಿದ್ದನು. ಅವನಿಗೆ ಕಮಲಾಬಾಯಿ ಎಂಬೊಬ್ಬ ೧೭-೧೮ ವರ್ಷದ ವಿಧವೆಯಾದ ಮಗಳು ಇದ್ದಳು. ಅವಳು ವರ್ಣದಿಂದಲೂ, ರೂಪದಿಂದಲೂ, ನೋಟಕ್ಕೆ ಬಹು ಚಲುವೆಯಾಗಿದ್ದಳು; ಆದರೆ ಅವಳ ವಿಷಯವಾಗಿ ವಿಠೋಜಿರಾಯರ ಅಭಿಪ್ರಾಯವು ಚೆನ್ನಾಗಿದ್ದಿಲ್ಲ. ವಿಶ್ವಾಸರಾಯನು ಮಾತ್ರ ಅವಳ ಮೋಹಕ್ಕೊಳಗಾಗಿದ್ದನು. ಆಕೆಯು ಕೂಡ ವಿಶ್ವಾಸರಾಯನ ಮದುವೆ ಮಾಡಲಿಕ್ಕೆ ನಮ್ಮ ಯಜಮಾನರು ಒಪ್ಪಿಕೊಳ್ಳಲಿಲ್ಲವಾದಗೂ, ವಿಶ್ವಾಸರಾಯನು ತನ್ನ ಕಕ್ಕನಿಗೆ ಗೊತ್ತಾಗದಂತೆ ದಾದರವೆಂಬಲ್ಲಿಗೆ ಹೋಗಿ ಕಮಲಾಬಾಯಿಯ ತಂದೆಯ ಅನುಮತಿಯಿಂದ ಅವಳನ್ನು ಮದುವೆ ಮಾಡಿಕೊಂಡನು. ಈ ಸಂಗತಿಯು ನಮ್ಮ ಯಜಮಾನರ ಕಿವಿಗೆ ಬಿದ್ದಕೂಡಲೆ, ಅವರು ವಿಶ್ವಾಸರಾಯನಿಗೆ ಬೇರೆ ಮನೆ ಮಾಡಿಕೊಂಡು ಇರಲಿಕ್ಕೆ ಹೇಳಿದರು. ಯಾಕಂದರೆ, ಕಮಲಾಬಾಯಿಯು ತಮ್ಮ ಮನೆಯಲ್ಲಿ ಬಂದು ಇರುವದು ಅವರಿಗೆ ಯೋಗ್ಯ ಕಾಣಲಿಲ್ಲ. ವಿಶ್ವಾಸರಾಯನು ಮನೆಬಿಟ್ಟು ಹೋಗುವಾಗ ಮುದುಕನಿಗೆ ದುಡ್ಡು ಕೊಡೆಂದು ಕೇಳಿದನು. ಅವನ ಮೇಲೆ ನಮ್ಮ ಯಜಮಾನರ ಪ್ರೇಮ ಬಹಳ. ಆದ್ದರಿಂದ ಆಗ ಅವರು ವಿಶ್ವಾಸರಾಯನಿಗೆ ಒಂದು ಸಾವಿರ ರೂಪಾಯಿ ರೋಖು ಕೊಟ್ಟರು. ಕೈಯಲ್ಲಿ ಗಂಟು ಸಿಕ್ಕ ಕೂಡಲೆ ವಿಶ್ವಾಸರಾಯನು ತನ್ನ ಕಾಯಂ ಕೆಲಸವನ್ನು ಬಿಟ್ಟುಕೊಟ್ಟು, ಒಬ್ಬ ಪಾಲುಗಾರನನ್ನು ಕೂಡಿಕೊಂಡು, ಖೊಟ್ಟೆ ಹರಳುಗಳ ವ್ಯಾಪಾರ ಮಾಡಹತ್ತಿದನು. ಇದು ಸಹ ನಮ್ಮ ಯಜಮಾನರ ಮನಸ್ಸಿಗೆ ಬರಲಿಲ್ಲ. ವಿಶ್ವಾಸರಾಯನ ಹೆಂಡತಿಯು ಕೈ ಬಿಗಿಹಿಡಿದು ಖರ್ಚು ಮಾಡುವವಳಲ್ಲದ್ದರಿಂದ, ತುಸು ದಿವಸಗಳಲ್ಲಿಯೇ ಮುದುಕನು ಕೊಟ್ಟ ಎಷ್ಟೋ ರೂಪಾಯಿಗಳು ಮಣ್ಣುಪಾಲಾಗಿ, ಅವರಿಗೆ ಮೇಲೆ

ಮೇಲೆ ದಿವಾಳಿ ತೆಗೆಯುವ ಹೊತ್ತು ಬಗಹತ್ತಿತು. ನಮ್ಮ ಯಜಮಾನರು ಅವನಿಗೆ ಮೇಲೆ ಮೇಲೆ ಹಣ ಕೊಡುತ್ತಿದ್ದರು. ಇತ್ತಿತ್ತಲಾಗಿ ಒಂದು ವರ್ಷದಿಂದ ಮಾತ್ರ ಅವರು ಅವನಿಗೆ ಒಂದು ಕಾಸು ಸಹ ಹತ್ತ ಗೊಟ್ಟಿಲ್ಲ. ದುಡ್ಡು ಸಿಗದಾದ ಕೂಡಲೆ ಅವನಿಗೆ ಬಹಳ ಕಷ್ಟವಾಯಿತು. ಅವನ ಪಾಲುಗಾರನು ಅವನನ್ನು ಬಿಟ್ಟುಕೊಟ್ಟು ಎರಡನೇ ಕಡೆಗೆ ಸ್ವತಂತ್ರ ಅಂಗಡಿಯನ್ನು ಹಾಕಿದನು. ವಿಶ್ವಾಸರಾಯನು ದಿನಾಲು ಮುದುಕನ ಹತ್ತರ ಬಂದು, ಕಣ್ಣೀರುಸುರಿಸಿ ಹೋಗುತ್ತಿದ್ದನು. ಆದರೂ ನಮ್ಮ ಯಜಮಾನರು—"ನಾನು ಜೀವದಿಂದ ಇರುವ ವರೆಗೆ ನಿನ್ನ ಹೆಂಡತಿಯ ಬಯಕೆಗಳನ್ನು ಪೂರಯಿಸುವದಕ್ಕಾಗಿ, ಇನ್ನು ನಿನಗೆ ಒಂದು ಕಾಸು ಸಹ ಕೊಡಲಾರೆನು. ನಾನು ಸತ್ತ ಬಳಿಕ ಈ ಬದುಕೆಲ್ಲ ನಿನ್ನದೇ ಇದೆ. ನನ್ನ ಹಿಂದೆ ನೀವು ಬೇಕುಬೇಕಾದ ಹಾಗೆ ಕುಣಿದಾಡಿರಿ, ಎಂದು ಅನ್ನುತ್ತಿದ್ದರು.

ಅಡಿಗೆಯವನು ಈ ವೃತ್ತಾಂತವನ್ನು ಹೇಳುತ್ತಿರುವಾಗ, ನಡುವೇ ಮುರಾರಿಪಂತನು ಅವನನ್ನು ಕುರಿತು—"ಒಳ್ಳೇದು, ನಿನಗೆ ನಿನ್ನ ಯಜಮಾನನ ಕೊಲೆಯಾದದ್ದು ಯಾವಾಗ ಗೊತ್ತಾಯಿತು.?" ಎಂದು ಕೇಳಿದನು.

ಅಡಿಗೆಯವ—ನಿನ್ನೆ ರಾತ್ರಿ ನಮ್ಮ ಊಟ-ಉಡಿಗೆಗಳು ಮುಗಿದ ಮೇಲೆ ೧೦ ಗಂಟೆಯ ಸುಮಾರಿಗೆ ನಾನು ಯಜಮಾನರ ಅಪ್ಪಣೆಯನ್ನು ಪಡೆದು, ಪರಳ ಎಂಬಲ್ಲಿಗೆ ಹೋಗಿದ್ದೆನು. ಅಲ್ಲಿ ನಮ್ಮ ಊರ ಒಬ್ಬ ಗೃಹಸ್ಥನಿರುವನು. ರಾತ್ರಿ ಇಲ್ಲಿಂದ ಹೊರಬಿದ್ದು ಹೋಗುವಾಗ ವಿಶ್ವಾಸರಾಯನು ಇತ್ತ ಕಡೆಗೆ ಬರುತ್ತಿದ್ದದ್ದನ್ನು ನಾನು ನೋಡಿದೆನು. ಇಂದು ಮಧ್ಯಾಹ್ನದ ಒಂದು ಗಂಟೆಯ ಸುಮಾರಿಗೆ ಪರಳದಿಂದ ನಾನು ತಿರುಗಿ ಬಂದೆನು. ಆಗ ನಮ್ಮ ಯಜಮಾನರ ಕೋಣೆಗೆ ಕೀಲಿ ಹಾಕಿತ್ತು. ನನ್ನ ಹತ್ತರ ಅದಕ್ಕೆ ಬರುವದೊಂದು ಕೀಲೀಕೈ ಇತ್ತು. ಅದರಿಂದ ಆ ಕೀಲಿಯನ್ನು ತೆಗೆದು ನೋಡುತ್ತೇನೆ! ಒಳಗೆ ಈ ಸ್ಥಿತಿಯು ದೃಷ್ಟಿಗೆ ಬಿದ್ದಿತು. ಕೂಡಲೆ ನಾನು ಈ ಸಂಗತಿಯನ್ನು ಪೋಲೀಸರಿಗೆ ತಿಳಿಸಿದೆನು. ಬಹುಶಃ ಈ ಕೆಲಸವು ವಿಶ್ವಾಸರಾಯನಿಂದಲೇ ಮಾಡಲ್ಪಟ್ಟಿರುವದೆಂದು ನಾನು ತಿಳಿದಿರುವೆನು. ನಮ್ಮ ಯಜಮಾನರು ಬಹಳ ಒಳ್ಳೆಯವರು; ನನ್ನನ್ನು ಅವರು

ಬಹಳ ಪ್ರೀತಿಸುತ್ತಿದ್ದರು; ಇಂಥ ಯಜಮಾನರು ಇನ್ನು ದೊರೆಯುವದು ಅಸಾಧ್ಯವು!

ಈ ಪ್ರಕಾರ ತನಗೆ ಗೊತ್ತಿದ್ದ ಸಂಗತಿಯನ್ನು ಹೇಳುತ್ತಿರಲು ಆ ಅಡಿಗೆಯವನ ಮನಸಿಗೆ ಬಹಳದುಃಖವಾಗಿಅಳಹತ್ತಿದನು. ಆಗ ಮುರಾರಿಪಂತನು ಅವನನ್ನುದ್ದೇಶಿಸಿ,—ಈಕೊಲೆಯನ್ನು ವಿಶ್ವಾಸರಾಯನೇ ಮಾಡಿರುವನೆಂದು ನೀನು ಯಾತರ ಮೇಲಿಂದ ಅನ್ನುತ್ತೀ?

ಅಡಿಗೆಯವ — ದೇವರು, ಇನ್ನೇನು ಹೇಳಲಿ? ಅವನ ಹೊರತು ಮತ್ತಾರು ಇರುವರು? ಈ ವಠಾರದಲ್ಲಿ ನಮ್ಮ ಯಜಮಾನನಿಗೆ ಬೇಡಾದವರು ಯಾರೂ ಇಲ್ಲ. ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು. ಇತ್ತಿತ್ತಲಾಗಿ ವಿಶ್ವಾಸರಾಯನು ಬಹಳ ದೀನಾವಸ್ಥೆಯನ್ನು ಹೊಂದಿದ್ದನ್ನು ನಾನು ಬಲ್ಲೆನು. ಅದರಿಂದಲೇ ಅವನು ತನ್ನ ಕಕ್ಕನ ದುಡ್ಡು ಬೇಗನೆ ತನ್ನ ಕೈಗೆ ಸಿಗಬೇಕೆಂಬ ದುರಾಶೆಯಿಂದ, ಈ ನಿಂದ್ಯವಾದ ಕೆಲಸಕ್ಕೆ ಕೈಹಾಕಿರಲಿಕ್ಕೆ ಬೇಕು. ಇದಲ್ಲದೆ ನಿನ್ನೆ ರಾತ್ರಿ ಅವನು ಇತ್ತ ಬರುವದನ್ನು ನಾನು ಪ್ರತ್ಯಕ್ಷ ನೋಡಿರುತ್ತೇನೆ. ಮತ್ತು ಇಲ್ಲಿಂದ ಹನ್ನೆರಡು ಗಂಟೆಯ ಸುಮಾರಿಗೆ ಅವನು ತಿರುಗಿ ಹೋದದ್ದನ್ನು ಈ ವಠಾರದ ಕಾವಲುಗಾರನು ನೋಡಿದೆನೆಂದು ಅನ್ನುತ್ತಾನೆ. ಅನಂತರ ನಮ್ಮ ಯಜಮಾನರ ಕಡೆಗೆ ಯಾರೂ ಬಂದಿಲ್ಲವೆಂಬದನ್ನು ಅವನೇ ಹೇಳಿದನು. ಈ ಎಲ್ಲ ಸಂಗತಿಗಳ ಮೇಲಿಂದ ಈ ಕೊಲೆಯು ವಿಶ್ವಾಸರಾಯನಿಂದಲೇ ಮಾಡಲ್ಪಟ್ಟಿರುವದೆಂದು ನಾನು ಮನಗಂಡಿದ್ದೇನೆ.

ಮುರಾರಿಪಂತ—ನಿನ್ನೆ ರಾತ್ರಿ ನಿನಗೆ ಎದುರಾದ ಗ್ರಹಸ್ಥನು ವಿಶ್ವಾಸರಾಯನೇ ಎಂಬದು ನಿನಗೆ ಚೆನ್ನಾಗಿ ಗೊತ್ತುಂಟೋ?

ಅಡಿಗೆಯವ—ಅಹುದು ನನಗೆ ಗೊತ್ತುಂಟು.

ಮುರಾರಿ—ಆಗ ನೀನು ಅವನ ಕೂಡ ಏನಾದರೂ ಮಾತು-ಕಥೆಗಳನ್ನಾಡಿರಬಹುದಲ್ಲವೆ?

ಅಡಿಗೆಯವ—ಇಲ್ಲ; ನನಗೂ ಅವನಿಗೂ ಎಂದೂ ಭಾಷಣವಿಲ್ಲ. ಮತ್ತು ಅವನು" ನನ್ನನ್ನು ಕಂಡ ಕೂಡಲೆ ಮೋರೆಯನ್ನು ತಪ್ಪಿಸಿಕೊಳ್ಳುತ್ತಿರುತ್ತಾನೆ. ನಮ್ಮ ವಠಾರದ ಹೊರಮುಗ್ಗಲು ದೀಪವಿರದ್ದರಿಂದ ನಿನ್ನೆ

ಕತ್ತಲೆಯಲ್ಲಿ ಅವನ ಮುಖವು ನನಗೆ ಚೆನ್ನಾಗಿ, ಕಾಣಲಿಲ್ಲ.

ಈ ಮಾತನ್ನು ಕೇಳಿದ ಕೂಡಲೆ ಖುರ್ಚಿಯಮೇಲೆ ಕುಳಿತ ಗಣಪತರಾಯನು ಚಟ್ಟನೆ ಎದ್ದುನಿಂತು—ಹಾಗಾದರೆ, ಅವನೇ ವಿಶ್ವಾಸರಾಯನೆಂಬದನ್ನು ನೀನು ಹೇಗೆ ಹೇಳುತ್ತೀ? ಎಂದು ಅಂದನು.

ಗಣಪತರಾಯನ ಈ ಪ್ರಶ್ನವನ್ನು ಕೇಳಿದ ಕೂಡಲೆ ಆ ಅಡಿಗೆಯವನು ತುಸು ಗಾಬರಿಯಾದನು. ಆದರೂ ಅವನು ಧೈರ್ಯದಿಂದ ಮತ್ತೆ ತನ್ನ ತಪ್ಪನ್ನು ತಿದ್ದಿಕೊಂಡು—

ಅಡಿಗೆಯವ—ರಾತ್ರಿಯಲ್ಲಿ ನನಗೆ ಅವನ ಮೋರೆಯು ಕಾಣದಿದ್ದರೂ, ಅವನ ನಾಯಿಯನ್ನು ನಾನು ಚೆನ್ನಾಗಿ ಬಲ್ಲೆನು. ಅದು ಬಹಳ ಉಗ್ರಪ್ರಾಣಿಯು. ಅದು ಒಮ್ಮೆಲೆ ಸಿಕ್ಕವರ ಮೈಮೇಲೆ ಬರುತ್ತದೆ. ತನ್ನ ಒಡೆಯ, ಒಡತಿ ಇವರ ಹೊರತು ಅದು ಬೇರೆ ಯಾರಿಗೂ ಹಿಡಿಯಗೊಡುವದಿಲ್ಲ. ಬೇರೆಯವರ ಸಂಗಡ ಹೋಗುವದಂತು ದೂರೇ ಇರಲಿ.

ಮುರಾರಿಪಂತ—ಸೈ, ಸೈ; ಇನ್ನು ನೀನು ಹೋಗು, ನಿನ್ನ ಕೆಲಸವಾಯಿತು.

ಇಷ್ಟಂದದ್ದೇ ಆ ಬಡಮುದುಕನಿಗೆ ಸಾಕಾಯಿತು. ಮೊದಲೇ ಅವನಿಗೆ ಈ ಕಷ್ಟದಿಂದ ಹೇಗೆ ಪಾರಾದೇನೆಂದು ಅನಿಸಿತ್ತು. ಅಷ್ಟರಲ್ಲಿ ಮುರಾರಿಪಂತನ ಬಾಯಿಂದ "ಹೋಗು" ಎಂಬ ಶಬ್ದವು ಹೊರಟಾಕ್ಷಣವೆ ಅವನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಇತ್ತ ಮುರಾರಿಪಂತನು ಗಣಪತರಾಯನನ್ನು ಕುರಿತು—"ಗಣಪತರಾಯರೆ, ನೀವು ಏನು ಬೇಕಾದದ್ದು ಅನ್ನಿರಿ. ನನಗಂತೂ ಈ ಕೊಲೆಯು ವಿಶ್ವಾಸರಾಯನಿಂದಲೇ ಆಗಿರಬಹುದೆಂದು ತೋರುತ್ತದೆ ಎಂದು ಅಂದನು. ಅಡಿಗೆಯವನ ಕೂಡ ಮುರಾರಿಪಂತನ ಮಾತುಗಳು ನಡೆದ ಕಾಲಕ್ಕೆ ಡಾಕ್ಟರನು ಬಂದು ಪ್ರೇತಪರೀಕ್ಷೆಯನ್ನು ಮಾಡಿ," ತನ್ನ ರಿಪೋರ್ಟನ್ನು ಇನಸ್ಪೆಕ್ಟರ ಸಾಹೇಬರ ಕಡೆಗೆ ಕೊಟ್ಟು ಹೋಗಿದ್ದನು. ಗಣಪತರಾಯನು ಮುರಾರಿಪಂತನಿಗೆ ಹೇಳಿ, ಆ ರಿಪೋರ್ಟನ್ನು ಇನಸ್ಪೆಕ್ಟರರಿಂದ ಇಸಕೊಂಡು ಓದಿ ನೋಡಿದನು. ಅದರಿಂದ ಅವನಿಗೆ ಡಾಕ್ಟರರ ಮತವಾದರೂ ತನ್ನಂತೆ ಇದ್ದದ್ದು ಕಂಡುಬಂತು. ಮತ್ತು ಆಗ ಅವನಿಗೆ ತುಸು ಆನಂದವೂ ಆಯಿತು.

ಆ ರಿಪೋರ್ಟಿನೊಳಗಿನ ಒಂದೇ ಒಂದು ವಾಕ್ಯವನ್ನು ಕೊಟ್ಟರೆ, ಅವನಿಗೆ ಆದ ಆನಂದದ ಕಾರಣವು ವಾಚಕರಿಗೆ ಸಹಜವಾಗಿ ಗೊತ್ತಾಗುವದು. ತಾನು ಮಾಡಿದ್ದೆಂಬ ಅಭಿಮಾನವು ಎಲ್ಲಕ್ಕೂ ಹೆಚ್ಚಿನದಲ್ಲವೇ? ಆವಾಕ್ಯವು ಯಾವದೆಂದರೆಃ—

"ಕೊಲ್ಲಲ್ಪಟ್ಟ ಮನುಷ್ಯನು ಗಾಯವಾದ ಕೂಡಲೆ ಮೃತಪಟ್ಟಿರುತ್ತಾನೆ; "ವಿಶ್ವಾಸ" ಈ ಅಕ್ಷರಗಳು, ಅವನಿಂದ ಬರೆಯಲ್ಪಟ್ಟವುಗಳಲ್ಲ."

ಈ ವಾಕ್ಯವನ್ನು ಕೇಳಿ ಮುರಾರಿಪಂತನ ಮನಸ್ಸಿನ ಸ್ಥಿತಿಯು ವಿಚಿತ್ರವಾಯಿತು. ಅವನು ಒಳ್ಳೇ ವಿಸ್ಮಯದಿಂದ—ಮೃತನು ಈ ಅಕ್ಷರಗಳನ್ನು ಬರೆಯದಿದ್ದರೆ, ಯಾರು ಬರೆದಿರುವರೆನ್ನಬೇಕು? ವಿಶ್ವಾಸರಾಯನಂತೂ ಬರೆದೇ ಇಲ್ಲ. ನಿಜವಾದ ಸಂಗತಿಯು ದೇವರಿಗೇ ಗೊತ್ತು, ಎಂದು ಅಂದನು.

ಅದಕ್ಕೆ ಗಣಪತರಾಯನು ಏನೂ ಮಾತಾಡದೆ ಸುಮ್ಮನಿದ್ದನು. ಇನಸ್ಪೆಕ್ಟರಸಾಹೇಬರವರು ಈ ಕಾಲಕ್ಕೆ ಮನೆಗೆ ಹೋಗಲಿಕ್ಕೆ ಸಿದ್ಧರಾಗಿದ್ದರು. ಅವರು ಹೋಗುವಾಗ ಮುರಾರಿಪಂತನ ನಿರರ್ಥಕವಾದ ಸಂಶಯದ ಸ್ವಭಾವಕ್ಕೆ ದೋಷ ಕೊಟ್ಟರು. ಅದಕ್ಕೆ ಮುರಾರಿಪಂತನು ತನ್ನ ಮನಸ್ಸಿನಲ್ಲಿಯೇ—"ಸರಿ, ಸರಿ; ತಮ್ಮ ಮತದಿಂದ ನಾನು ತೀರ ಮೂರ್ಖನೆಂದು ಗೊತ್ತಾದಂತಾಯಿತು." ಎಂದನು. ಮತ್ತು ಗಣಪತರಾಯನನ್ನು ಕುರಿತು—ಗಣಪತರಾಯರೇ, ಇವರ ಕಥೆಯನ್ನು ಏನು ಹೇಳಲಿ? ಇವರು ಕಮಿಶನರ ಸಾಹೇಬರ ಮರ್ಜೀ ಹಿಡಿದು, ದೊಡ್ಡ ದೊಡ್ಡ ಸಂಬಳದ ಜಾಗೆಗಳನ್ನು ಮಾತ್ರ ಪಡೆದಿರುವರಲ್ಲದೆ, ಬುದ್ಧಿವಂತಿಕೆಯ ಸಂಬಂಧದಿಂದ ಬಂಡೀಗಾಲಿಯು. ಹೇಗಿದ್ದರೂ ಅಷ್ಟೇ, ನಮಗೇನು ಮಾಡುವರು. ನಡೆಯಿರಿ, ನಾವು ಇನ್ನು ಗಿರಗಾವ ಪೋಲೀಸಚೌಕಿಗೆ ಹೋಗುವಾ, ಎಂದು, ಅವರಿಬ್ಬರು ಅಲ್ಲಿಂದ ಹೊರಟರು.

೭ನೆಯ ಪ್ರಕರಣ.

## ಸದ್ಯಕ್ಕೆ ನನ್ನನ್ನು ಬಿಟ್ಟು ಹೋಗಿರಿ ನೋಡುವಾ!



ಆ ಕಾಲಕ್ಕೆ ಗಡಿಯಾಳದಲ್ಲಿ ಎಂಟು ಬಡೆಯಿತು. ಇದು ರಾತ್ರಿಯ ಊಟದ ವೇಳೆಯು; ಆದರೆ ಅವರಿಬ್ಬರ ಮನಸ್ಸೂ ಈ ಖೂನಿಯ ಪ್ರಕರಣದಲ್ಲಿ ತೊಡಗಿದ್ದರಿಂದ, ಅವರಿಗೆ ಊಟದಪರಿವೆಯೇ ಇದ್ದಿಲ್ಲ. ಕೊಲೆಯಾದ ಸ್ಥಳವನ್ನು ಬಿಟ್ಟು ಹೊರಟನಂತರ, ಅವರು ತುಸುಹೊತ್ತಿನಲ್ಲಿ ಗಿರಗಾವ ಪೋಲೀಸಚೌಕಿಗೆ ಬಂದು ಮುಟ್ಟಿದರು. ಅಲ್ಲಿ ವ್ಯಾಜಿಸ್ಟ್ರೇಟರು ವಿಶ್ವಾಸರಾಯನ ಜಬಾನಿಯನ್ನು ತೆಗೆದುಕೊಳ್ಳುತ್ತಿದ್ದರು. ಇವರೀರ್ವರು ವಿಶ್ವಾಸರಾಯನನ್ನು ಕಂಡು, ಅವನ ಅಂಬೋಣವನ್ನು ಕೇಳಿಕೊಳ್ಳುವ ಉದ್ದೇಶದಿಂದಲೇ ಈ ಚೌಕಿಗೆ ಬಂದಿದ್ದರು; ಆದರೆ ಅವನು ಸದ್ಯಕ್ಕೆ ವ್ಯಾಜಿಸ್ಟ್ರೇಟರ ಆಧೀನದಲ್ಲಿದ್ದದ್ದರಿಂದ, ಅವರ ಜಬಾನಿಯ ಕೆಲಸವು ತೀರುವವರೆಗೆ ಇವರು ತಡೆಯಬೇಕಾಯಿತು. ಅಲ್ಲಿಯವರೆಗೆ ಚೌಕಿಯ ಹೊರಗೆ ಇಟ್ಟಿದ್ದ ಒಂದು ಬಾಕಿನ ಮೇಲೆ ಅವರಿಬ್ಬರೂ ಕುಳಿತರು. ಮುರಾರಿಪಂತನು ಕಿಸೆಯೊಳಗಿನ ಬೂಚನ್ನು ಕೈಯಲ್ಲಿ ತಕ್ಕೊಂಡು, ಅದನ್ನು ಕೆಳಗೆ ಮೇಲೆ ತಿರುಗಿಸುತ್ತ ಸೂಕ್ಷ್ಮದೃಷ್ಟಿಯಿಂದ ನೋಡಿ—"ಈ ಕೊಲೆಯ ಶೋಧವಾಗುವದಿದ್ದರೆ, ಈ ಬೂಚಿನಿಂದಲೇ ಆಗುವದು." ಎಂದು ಅಂದನು.

ಅದಕ್ಕೆ ಗಣಪತರಾಯನು ಏನೂ ಮಾತಾಡದೆ ಸುಮ್ಮನಿದ್ದನು. ಆದರೂ ಅವನ ಸಂಪೂರ್ಣ ಲಕ್ಷವು ಮುರಾರಿಪಂತನ ಕಡೆಗೇ ಇತ್ತು. ಅವನು ಮುರಾರಿಪಂತನ ಮುಖಮುದ್ರೆಯನ್ನೂ, ಚಲನವಲನಗಳನ್ನೂ ಲಕ್ಷಪೂರ್ವಕವಾಗಿ ನೋಡುತ್ತಿದ್ದನು; ಆದರೆ ಮುರಾರಿಪಂತನು ಮಾತ್ರ ಆಬೂಚನ್ನು ಹಲವು ಬಗೆಯಿಂದ ನೋಡುವದರಲ್ಲಿ ತೊಡಗಿದ್ದನು. ಅವನ ದೃಷ್ಟಿಯು ಅವನ್ನೇ ಸುತ್ತುವರಿಯುತ್ತಿತ್ತು. ಮಂಗನ ಕೈಗೆ ಒಂದು ಕೊಬ್ಬರಿಯ ಬಟ್ಟಲವು ಸಿಕ್ಕರೆ, ಅದು ಅದರೊಳಗಿನ ಕೊಬ್ಬರಿಯನ್ನು ಯಾವ ರೀತಿಯಿಂದ ಕಡೆಗೆ ತೆಗೆದು ತಿನ್ನಬೇಕೆಂಬ ಆಲೋಚನೆಯಲ್ಲಿರುವಂತೆ, ಮುರಾರಿ

ಪಂತನು ಆಲೋಚಿಸುತ್ತಿದ್ದನು. ಅಷ್ಟರಲ್ಲಿ ಮ್ಯಾಜಿಸ್ಟ್ರೇಟರು ಆರೋಪಿಯು ಜವಾಬು ತೆಗೆದುಕೊಂಡು ಹೊರಗೆ ಹೊರಟದ್ದನ್ನು ಮುರಾರಿಪಂತನುಕಂಡು—ನಡೆಯಿರಿ ಗಣಪತರಾಯರೇ, ಇನ್ನು ನಾವು ವಿಶ್ವಾಸರಾಯನನ್ನು ಕಾಣೋಣ.

ಗಣಪತರಾಯ—ನಿಮಗೆ ಒಳಗೆ ಹೋಗಗೊಡುವರೋ?

ಮುರಾರಿಪಂತ—ಓಹೋ, ನನಗಂತೂ ಒತ್ತಟ್ಟಿಗಿರಲಿ; ನಿಮಗೆ ಸಹ ಇಲ್ಲಿ ಯಾರೂ ಪ್ರತಿಬಂಧ ಮಾಡುವದಿಲ್ಲ. ಬೇಗನೆ ಏಳಿರಿ.

ಹುಟ್ಟಾ ಪೊಲೀಸಚಾವಡಿಯ ಕಟ್ಟೆಯನ್ನು ಹತ್ತದಂಥ ಒಬ್ಬ ಮನುಷ್ಯನು ಎಂದಾದರೂ ಒಂದು ದಿವಸ ಅಲ್ಲಿಗೆ ಹೋದರೆ, ಅವನ ಸ್ಥಿತಿಯು ವಿಚಿತ್ರವಾಗುತ್ತಿರುತ್ತದೆ. ಇದಲ್ಲದೆ ಪ್ರತಿ ಒಬ್ಬ ಸಂಭಾವಿತ ಮನುಷ್ಯನು ಪೋಲೀಸಖಾತೆಯ ವಿಷಯವಾಗಿ ತಪ್ಪು ತಿಳುವಳಿಕೆಯುಳ್ಳವನಾಗಿರುತ್ತಾನೆ. ಸರ್ವಸಾಧಾರಣವಾಗಿ ಒಬ್ಬ ಪೋಲೀಸ ಶಿಪಾಯಿಯು ದಾರೀಹಿಡಿದು ಹೋಗುತ್ತಿರುವಾಗ, ಅವನನ್ನು ಕಂಡು ಅವನ ಬಗ್ಗೆ ಮನಸ್ಸಿನಲ್ಲಿ ತಿರಸ್ಕಾರ ಬುದ್ಧಿಯು ಹುಟ್ಟುತ್ತದೆ. ಸರಕಾರದವರು ಈ ಖಾತೆಯನ್ನು ಪ್ರಜೆಗಳ ಕಲ್ಯಾಣಕ್ಕಾಗಿಯೇ ಸ್ಥಾಪಿಸಿರುತ್ತಾರೆ. ಆದರೂ "ಪೋಲೀಸ" ಎಂಬ ಶಬ್ದವನ್ನು ಕೇಳಿದ ಕೂಡಲೆ, ಮನಸ್ಸಿನಲ್ಲಿ ನಾನಾಪ್ರಕಾರದ ವಿಚಾರಗಳು ಬರುತ್ತವೆ. ತಪ್ಪುಗಾರರನ್ನು ಗೊತ್ತುಹಚ್ಚಿ ಅವರಿಗೆ ಯೋಗ್ಯ ಶಾಸನವನ್ನು ಮಾಡಿಸುವದು ಇವರ ಕರ್ತವ್ಯವು; ಆದರೆ ತಪ್ಪುಗಾರರನ್ನು ಶೋಧಿಸುವ ಕಾಲಕ್ಕೆ ಒಮ್ಮೊಮ್ಮೆ ಇವರು ಮಾಡುತ್ತಿರುವ ಖಟಾಟೋಪವನ್ನು ಕಂಡು, ಸಂಭಾವಿತ ಗೃಹಸ್ಥನು ಸಹ ತನ್ನ ಮೇಲೆ ಈ ಖಾತೆಯವರಿಂದ ಯಾವ ಕಾಲಕ್ಕೆ ಎಂಥ ಪ್ರಸಂಗ ಬಂದೀತೆಂದು ಹೆದರಿ, ಹಗಲಿರುಳು ಈ ಖಾತೆಯನ್ನು ತಿರಸ್ಕರಿಸುವದು ಆಶ್ಚರ್ಯವಲ್ಲ. ಮತ್ತು ಸಾಧಾರಣ ವ್ಯವಹಾರದಲ್ಲಿ ಅನುಭವದಿಂದ ಕಂಡುಬಂದ ಸಂಗತಿಯೇನಂದರೆ:—

ನೂರಾರು ಅಪರಾಧಗಳನ್ನು ಮಾಡಿ ಮೊದಲನೆಯ ವರ್ಗದ ದುರ್ವಿನೀತರೆನ್ನಿಸಿಕೊಳ್ಳುತ್ತಿದ್ದ ಜನರು ಈ ಖಾತೆಯನ್ನು ಲೆಕ್ಕಿಸುವದೇ ಇಲ್ಲ. ಆದರೆ ನಿರಪರಾಧಿಗಳಾದ ಬಡಜನರು ಮಾತ್ರ, ಈ ಯಮದೂತರ ಕೈಯಲ್ಲಿ ಸಿಕ್ಕು ನಿಷ್ಕಾರಣವಾಗಿ ಪೇಚಾಡುತ್ತಾರೆ. ಅದರಿಂದ ಅವರ ಮನಸ್ಸಿನಲ್ಲಿ

ಈ ಖಾತೆಯ ವಿಷಯವಾಗಿ ಹೆಸರಿಕೆಯೂ, ತಿರಸ್ಕಾರವೂ ಹುಟ್ಟದೇನುವಾಗಿ ಡೀತು? ಜನರು ಪೋಲೀಸಖಾತೆಯನ್ನು ದ್ವೇಷಿಸಲಿಕ್ಕೆ ಇನ್ನೊಂದು ಮಹತ್ವದ ಕಾರಣವೂ ಉಂಟು. ಅದೇನಂದರೆ, ಈ ಖಾತೆಯಲ್ಲಿ ಬಹುಶಃ ಹುಂಬರೂ, ಅಕ್ಷರಶತ್ರುಗಳೂ ಆದವರೇ ಬಹುಜನ ನೌಕರರಿರುತ್ತಾರೆ. ಈ ಅಶಿಕ್ಷಿತ ಜನರು ತಮ್ಮ ಕರ್ತವ್ಯವನ್ನು ಯೋಗ್ಯರೀತಿಯಿಂದ ತಿಳಕೊಳ್ಳದೆ, ಕೈಯಲ್ಲಿ ಬಂದ ಅಧಿಕಾರದ ದುರುಪಯೋಗವನ್ನು ಮಾಡಿ, ಬಡಜನರಿಗೆ ನಿಜವಾದ ಯಮದೂತರೇ ಆಗಿರುತ್ತಾರೆ; ಮತ್ತು ಇವರು ಕಳ್ಳರನ್ನು ಗೊತ್ತುಹಚ್ಚಿಕೊಡುವದು ಒತ್ತಟ್ಟಿಗೇ ಉಳಿದು ತಾವೇ ಕಳ್ಳತನದಹೋರೆಯನ್ನು ಕೈಕೊಂಡದ್ದು ಸಹ ಒಮ್ಮೊಮ್ಮೆ ದೃಷ್ಟಿಗೆ ಬೀಳುವದು. ಈ ಪ್ರಕಾರ ವಿತ್ತ-ಜೀವಿತಗಳ ಸಂರಕ್ಷಣಕ್ಕೋಸ್ಕರವೆಂದು ಸ್ಥಾಪಿಸಲ್ಪಟ್ಟ ಈ ಖಾತೆಯ ವಿಷಯವಾಗಿ ಜನರ ಪೂಜ್ಯಬುದ್ಧಿಯು ನಷ್ಟವಾಗಿ, ಅದಕ್ಕೆ ಪ್ರತಿಯಾಗಿ ಅನಾದರ ಹುಟ್ಟುವದು ಸ್ವಾಭಾವಿಕವಾಗಿರುತ್ತದೆ. ಗಣಪತರಾಯನು ಪೋಲೀಸ ಚಾವಡಿಯಲ್ಲಿ ಎಂದೂ ಕಾಲಿಟ್ಟವನಲ್ಲ. ಸಾಧಾರಣ ಜನರಂತೆ ಅವನಾದರೂ ಪೋಲೀಸ ಖಾತೆಯನ್ನೂ, ಪೋಲೀಸರನ್ನೂ ತಿರಸ್ಕರಿಸುತ್ತಿದ್ದನು.

ವಿಶ್ವಾಸರಾಯನನ್ನು ಸೆರೆಯಿಟ್ಟ ಕೋಣೆಯ ವರೆಗೆ ಬರುವ ತನಕ ಪೋಲೀಸರ ವಿಷಯವಾಗಿ ಅವನ ಮನಸ್ಸಿನಲ್ಲಿ ಮೇಲೆ ಬರೆದ ವಿಚಾರಗಳು ಬಂದುಹೋಗಿದ್ದವು. ನಿಜವಾದ ತಪ್ಪುಗಾರರನ್ನು ಶೋಧಮಾಡುವ ಬಗ್ಗೆ ಮುರಾರಿಪಂತನಲ್ಲಿ ಕಂಡು ಬಂದ ಉತ್ಸಾಹವನ್ನು ನೋಡಿ, ಅವನಲ್ಲಿದ್ದ ಈ ದ್ವೇಷಬುದ್ಧಿಯು ನಷ್ಟವಾಗಹತ್ತಿತ್ತು; ಆದರೆ ಆ ಖಾತೆಯೊಳಗಿನ ಎಲ್ಲ ಜನರೂ ಮುರಾರಿಪಂತನಂತೆ ಎಲ್ಲಿ ಎಚ್ಚರದಿಂದ ಕೆಲಸ ಮಾಡುವರು? ಮೇಲೆ ಬರೆದ ಇನಸ್ಪೆಕ್ಟರ ಸಾಹೇಬರಂಥ ಎಚ್ಚರಗೇಡಿಗಳೂ ದುರ್ಲಕ್ಷವುಳ್ಳವರೂ ಆದ ಜನರೇ ಬಹಳ. ಹೀಗೆ ವಿಚಾರಿಸುತ್ತ ಅವನು ಮುರಾರಿಪಂತನ ಬೆನ್ನು ಹತ್ತಿ ವಿಶ್ವಾಸರಾಯನನ್ನು ಇಟ್ಟ ಕೋಣೆಯ ಕಡೆಗೆ ಹೋಗುತ್ತಿರಲು, ದಾರಿಯಲ್ಲಿ ನಾಲ್ಕಾರುಮಂದಿ ಶಿಪಾಯಿಗಳು ಬತ್ತೀ ಸೇದುತ್ತ ಕುಳಿತಿದ್ದರು. ಅವರು ಎದ್ದುನಿಂತು ಮುರಾರಿಪಂತನಿಗೆ ಮುಜುರೆ ಮಾಡಿದರು. ಮುರಾರಿಪಂತನು ಅವರೊಳಗಿನವನೊಬ್ಬನನ್ನು ಒತ್ತಟ್ಟಿಗೆಕರೆದು, ಅವನಕಿವಿಯಲ್ಲಿ ಏನೋ ಹೇಳಿದನು. ಮತ್ತು ಗಣಪತರಾಯನಿಗೆ ತನ್ನ ಬೆನ್ನುಹತ್ತಿ ಬರಲಿಕ್ಕೆ ಸನ್ನೆ ಮಾಡಿ

ದನು. ಅಲ್ಲಿಂದ ತುಸು ಮುಂದೆ ಹೋಗಲು, ಕಬ್ಬಿಣದ ಗಜಗಳುಳ್ಳ ಕೆಲವು ಕೋಣೆಗಳು ಅವರ ದೃಷ್ಟಿಗೆ ಬಿದ್ದವು. ಆಗ ಅವರ ಕಾಲಸಪ್ಪಳವನ್ನು ಕೇಳಿ, ಅಲ್ಲಿದ್ದ ಒಬ್ಬ ಲಠ್ಠ ಕಾವಲುಗಾರನು ಬಂದು ಮುರಾರಿಪಂತನಿಗೆ ಸಲಾಮು ಮಾಡಿ—ನೀವು ಖೂನೀ ಮನುಷ್ಯನಿಗೆ ಭೆಟ್ಟಿಯಾಗಲಿಕ್ಕೆ ಬಂದಿದ್ದೀರಾದೀತು? ಎಂದು ಅಂದನು.

ಮುರಾರಿಪಂತ—ಅಹುದು; ಮತ್ತೇನು ಹೆಚ್ಚುಕಡಿಮೆ? ಹೊಸದೇನಾದರೂ ಸುದ್ದಿ ಇದ್ದರೆ ಹೇಳು.

ಶಿಪಾಯಿ—ಹೊಸದೇನೂ ಇಲ್ಲ; ಆದರೆ ಇದೇ ಈಗ ಮ್ಯಾಜಿಸ್ಟ್ರೇಟಸಾಹೇಬರು ಬಂದು ಹೋದರು. ಆರೋಪಿಯು ಕಬೂಲಿ ಜವಾಬು ಕೊಟ್ಟಂತೆ ತಿಳಿಯುತ್ತದೆ.

ಮುರಾರಿ—ಒಳ್ಳೇದು, ಆ ಕೈದಿಯು ಈಗ ಏನು ಮಾಡುತ್ತಿರುವನು?

ಶಿಪಾಯಿ—ಏನೂ ಇಲ್ಲ; ಆ ಬಡ ಪ್ರಾಣಿಯು ಇಲ್ಲಿಗೆ ಬಂದಾಗಿನಿಂದ ಒಂದೇ ಸಮನೆ ಅಳುತ್ತಿರುವನು. ನನಗೆ ಅವನ ಮೇಲೆ ಲಕ್ಷವಿಡುವ ಬಗ್ಗೆ ಸರಕಾರದ ಅಪ್ಪಣೆಯಾಗಿದೆ. ಆ ಪ್ರಕಾರ ನಾನು ಅವನನ್ನು ಬಿಟ್ಟುಬಿಡದೆ ನೋಡುತ್ತ ಕುಳಿತಿರುವೆನು. ನಿಜವಾಗಿ ವಿಚಾರಿಸಿದರೆ, ಅವನನ್ನು ಕಾಯುವ ಆವಶ್ಯಕತೆಯಿದ್ದಂತೆ ತೋರುವದಿಲ್ಲ. ಯಾಕಂದರೆ, ಇನ್ನು ಅವನು ತನ್ನನ್ನು ಗಲ್ಲಿಗೆ ಹಾಕುತ್ತಾರೆಂದು ಹೆದರಿ ಅಳುತ್ತಾನಲ್ಲದೆ ಬೇರೆ ಏನೂ ಕಾರಣವಿಲ್ಲ.

ಮುರಾರಿ—ಒಳ್ಳೇದು, ಅವನನ್ನು ಸೆರೆಹಾಕಿದ ಕೋಣೆಯ ಬಾಗಿಲವನ್ನು ತೆರೆ, ನಾನು ಅವನನ್ನು ಕಾಣಬೇಕಾಗಿದೆ.

ಕೂಡಲೆ, ಸಿಪಾಯಿಯು ವಿಶ್ವಾಸರಾಯನನ್ನು ಸೆರೆಯಿಟ್ಟಿದ್ದ ಕೋಣೆಯ ಬಾಗಿಲವನ್ನು ತೆರೆಯಲು, ಅವರು ಒಳಗೆ ಹೊಕ್ಕರು. ಅಲ್ಲಿ ವಿಶ್ವಾಸರಾಯನು ಒಂದು ಚಾಪೆಯ ಮೇಲೆ ಬಿದ್ದುಕೊಂಡು, ಬಹುದುಃಖದಿಂದ ಒಂದೇ ಸಮನೆ ಬಿಕ್ಕಿಬಿಕ್ಕಿ ಅಳುತ್ತಿದ್ದನು. ಗಣಪತರಾಯನೂ, ಮುರಾರಿಪಂತನೂ ಒಳಗೆ ಹೊಕ್ಕದ್ದನ್ನು ಕಂಡು ಅವನು ಎದ್ದು ಕುಳಿತು, ವಿಚಿತ್ರವಾದ ಮುಖಮುದ್ರೆಯಿಂದ ಅವರನ್ನು ನೋಡಹತ್ತಿದನು. ಅವನಿಗೆ ಸುಮಾರು ಮೂವತ್ತು ವರ್ಷಗಳಾಗಿರಬಹುದು. ಅವನ ನಿಲುವಿಕೆ ಎತ್ತರ; ಮೋರೆಯ ಮೇಲೆ ಮೈಲಿಯ ಕಲೆಗಳು; ಆದರೂ ಅವನ ಕಣ್ಣುಗಳು ಕರ್ರಗಾಗಿಯೂ, ದೊಡ

ವಾಗಿಯೂ, ಮನೋಹರವಾಗಿಯೂ ಇದ್ದವು. ಕೋಣೆಯೊಳಗೆ ಹೊಕ್ಕ ಕೂಡಲೆ, ಮುರಾರಿಪಂತನು ವಿಶ್ವಾಸರಾಯನನ್ನು ಕುರಿತು—ವಿಶ್ವಾಸರಾಯರೆ, ಹೀಗೆಹೆಂಗಸರಂತೆ ಅಳುತ್ತ ಕೂತರೆ ಏನಾಗುವದು? ಎಂದುಕೇಳಿದನು.

ಈ ಮಾತಿಗೆ ವಿಶ್ವಾಸರಾಯನು ಏನಾದರೂ ಉತ್ತರವನ್ನು ಕೊಟ್ಟಾನೆಂದು ಮುರಾರಿಪಂತನು ಒಂದು ಕ್ಷಣಹೊತ್ತು ಹಾದೀನೋಡಿದನು; ಆದರೆ ಅವನು ಸ್ತಬ್ಧನಾಗಿದ್ದದ್ದನ್ನು ಕಂಡು ಮತ್ತೆ ಮುರಾರಿಪಂತನೇ ಮಾತಾಡತೊಡಗಿದನು.

ಮುರಾರಿ—ನಿಮ್ಮ ಮೇಲೆ ಈಗ ದೊಡ್ಡ ಕಠಿನಪ್ರಸಂಗವು ಬಂದಿರುವದೆಂಬದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಇದೇ ಪ್ರಸಂಗವು ನನ್ನ ಮೇಲೆ ಬಂದಿದ್ದರೆ ನಾನು ನಿಶ್ಚಯವಾಗಿ ಹೀಗೆ ಅಳುತ್ತ ಕೂಡುತ್ತಿದ್ದಿಲ್ಲ. ಮನಸ್ಸಿಗೆ ಆಗುತ್ತಿರುವ ವ್ಯಥೆಯನ್ನು ಒದಿಗಿಟ್ಟು, ದುಃಖವನ್ನು ಸಹಿಸಿಕೊಂಡು, ಬಂದ ಅಪವಾದವನ್ನು ಹೋಗಲಾಡಿಸುತ್ತಿದ್ದೆನು. ಮೋರೆಯ ಮೇಲೆ ಮೀಸೆಗಳನ್ನು ಹೊತ್ತು, ಗಂಡಸರೆಂದೆನ್ನಿಸಿಕೊಳ್ಳುವ ನೀವು ಹೀಗೆ ಅಳುತ್ತ ಕೂಡುವದು ವಿಹಿತವೇ?

ಆಗ ವಿಶ್ವಾಸರಾಯನು ಮೋರೆ ಗಂಟಿಕ್ಕಿ ಸಂತಾಪಯುಕ್ತವಾದ ಸ್ವರದಿಂದ—ನೀವು ಹೇಳುವದೆಲ್ಲ ಸರಿ; ಆದರೆ ಈ ಕೊಲೆಮಾಡಿದವನು ನಾನೇ ಇರುತ್ತೇನೆ, ಎಂದು ಅಂದನು.

ವಿಶ್ವಾಸರಾಯನ ಕಬೂಲಿ ಜವಾಬನ್ನು ಕೇಳಿ ಅವರಿಬ್ಬರೂ ಚಕಿತರಾಗಿ, ಒಬ್ಬರಮೋರೆಯನ್ನೊಬ್ಬರು ನೋಡಹತ್ತಿದರು; ಮತ್ತು ಅವನ ತಪ್ಪಿನ ವಿಷಯವಾಗಿದ್ದ ಅವರ ಸಂಶಯವು ದೂರವಾಯಿತು; ಆದರೆ ಅಷ್ಟರಮೇಲಿಂದಲೇ ಮುರಾರಿಪಂತನಿಗೆ ಸಮಾಧಾನವಾಗಲಿಲ್ಲ. ಅವನು ವಿಶ್ವಾಸರಾಯನನ್ನು ಕುರಿತು—ಹಾಗಾದರೆ ನೀವು ನಿಮ್ಮ ಕಕ್ಕನನ್ನು ಕೊಂದದ್ದು ನಿಜವೋ?

ವಿಶ್ವಾಸ—ಅಹುದು, ಅಹುದು, ನನಗಂತೂ ಇದೊಂದೇ ಮಾತನ್ನು ಪುನಃ ಪುನಃ ಹೇಳಿ ಹೇಳಿ ತಲೆ ಬೇಸರಂಟ್ಟಿದೆ, ಇದೇ ಈಗ ಒಬ್ಬ ಮ್ಯಾಜಿಸ್ಟ್ರೇಟರು ಇಲ್ಲಿಗೆ ಬಂದಿದ್ದರು. ಅವರು ನನ್ನ ಕಬೂಲಿ ಜವಾಬನ್ನು ಬರಕೊಂಡು, ಅದರ ಮೇಲೆ ನನ್ನಸಹಿಯನ್ನು ಸಹ ಮಾಡಿಸಿಕೊಂಡಿರುತ್ತಾರೆ. ಇನ್ನುಮೇಲೆ ನೀವು ನನಗೆ ಮತ್ತೇನು ಮಾಡಲಿಕ್ಕೆ ಹೇಳುತ್ತೀರಿ? ನನ್ನ ದುರ್ದೈವವೇ ನನ್ನ

ಮುಂದೆ ಮೂರ್ತಿಮತ್ತಾಗಿ ನಿಂತಿರುವದು. ನಾನು ಒಂದು ಪ್ರಾಣಹತ್ಯ ವನ್ನು ಮಾಡಿದ್ದು ನಿಜವು; ಅದಕ್ಕೆ ಪ್ರತಿಯಾಗಿ ನನ್ನ ಶರೀರವನ್ನು ಬಲಿ ಯಾಗಿ ಕೊಡುವದು ಉಚಿತವು. ಇನ್ನು ಬೇಗನೆ ನನ್ನನ್ನು ಗಲ್ಲಿಗೆ ಹಾಕಿಸಿಬಿಡಿರಿ; ಅಂದರೆ ನಾನು ಈ ಯಾತನೆಯೊಳಗಿಂದ ಪಾರಾಗುವೆನು.

ವಿಶ್ವಾಸರಾಯನ ಈ ಮಾತುಗಳನ್ನು ಕೇಳಿ, ಮುರಾರಿಪಂತನು ತುಸು ಹೊತ್ತು ಸುಮ್ಮನೆ ನಿಂತುಕೊಂಡು ತರುವಾಯ—ವಿಶ್ವಾಸರಾಯರೆ, ತುಸು ಶಾಂತರಾಗಿರಿ. ಸರಕಾರದವರು ಯಾವನೊಬ್ಬ ಮನುಷ್ಯನನ್ನು ನಿಷ್ಕಾರಣ ವಾಗಿ ಗಲ್ಲಿಗೆ ಹಾಕುವದಿಲ್ಲ. ಅವನು ತಪ್ಪುಗಾರನೆಂದು ಕೋರ್ಟಿನಲ್ಲಿ ನಿರ್ಣ ಯವಾಗಬೇಕಾಗುತ್ತದೆ. ಕೆಲವೊಬ್ಬ ಮನುಷ್ಯನು ಹುಚ್ಚನಾಗಿ, ಅಥವಾ ಬೇರೆ ಕಾರಣಗಳ ಮೂಲಕವಾಗಿ, ನಿರಪರಾಧಿಯಿದ್ದಾಗ್ಯೂ ಸುಮ್ಮಸುಮ್ಮನೆ ಕಬೂಲಿ ಜವಾಬನ್ನು ಕೊಡುತ್ತಿರುತ್ತಾನೆ. ಈ ಮಾತಿನ ಕಡೆಗೆ ಸರಕಾ ರದವರು ಲಕ್ಷಕೊಡುತ್ತಿರುವರೆಂಬದು ನಿಮಗೆ ಗೊತ್ತಿಲ್ಲವೋ?

ಇದಕ್ಕೆ ವಿಶ್ವಾಸರಾಯನು ಏನೂ ಮಾತಾಡದೆ ಉಸರ್ಗರೆದು ಸುಮ್ಮನಾ ದನು. ಪುನಃ ಮುರಾರಿಪಂತನು—ಒಳ್ಳೇದು, ಅದು ಒತ್ತಟ್ಟಿಗಿರಲಿ; ನೀವು ನಿಮ್ಮ ಚಿಗಪ್ಪನ ಕೂಡ ಅವನನ್ನು ಕೊಲ್ಲುವಷ್ಟು ದ್ವೇಷಮಾಡುತ್ತಿದ್ದಿರೇನು?

ವಿಶ್ವಾಸ—ಛೇ, ಛೇ; ಎಂದೂ ಇಲ್ಲ.

ಮುರಾರಿ—ಹಾಗಾದರೆ ಅವನ ಖೂನು ಮಾಡಲಿಕ್ಕೆ ಕಾರಣವೇ ನಾಯಿತು?

ವಿಶ್ವಾಸ—ನನಗೆ ದ್ರವ್ಯಸಹಾಯವು ಬೇಕಾಗಿತ್ತು. ನನ್ನ ಉದ್ಯೋಗವು ದಿನದಿನಕ್ಕೆ ಕಳೆಗುಂದುತ್ತ ನಡೆದಿತ್ತು. ಈ ಬಗ್ಗೆ ಅನ್ಯತ್ರದಲ್ಲಿ ಶೋಧಿಸಲು ನಿಮಗೆ ಎಲ್ಲವೂ ವಿದಿತವಾಗುವದು. ನಮ್ಮ ಚಿಗಪ್ಪನಲ್ಲಿ ಬಹಳ ಧನವಿದ್ದು, ನನಗೆ ಅವನು ಏನೂಸಹಾಯ ಮಾಡದಾದದ್ದರಿಂದಲೂ, ನನ್ನ ದುಡ್ಡಿನಅಡಚ ಣೆಯು ಹೆಚ್ಚಾದದ್ದರಿಂದಲೂ, ಇಷ್ಟೇ ಮಾತಾಡಿ ವಿಶ್ವಾಸರಾಯನು ಸುಮ್ಮ ನಾಗಲು,

ಮುರಾರಿ—ತಿಳಿಯಿತು. ಕೊಲೆಮಾಡಿದ ಮೇಲೆ ನಿಮ್ಮ ಮೇಲೆ ಸಂಶಯ ಬರಲಿಕ್ಕಿಲ್ಲೆಂದು ನೀವು ತಿಳಕೊಂಡಿದ್ದಿರೇನು?

ವಿಶ್ವಾಸ—ಅಹುದು; ನನ್ನ ತಿಳುವಳಿಕೆಯು ಹಾಗೇ ಇತ್ತು.

ಇದನ್ನೆಲ್ಲ ಶಾಂತಚಿತ್ತನಾಗಿ ಕೇಳುತ್ತಿರುವ ಗಣಪತರಾಯನು ತನ್ನ ಮನಸ್ಸಿನಲ್ಲಿ—ಹಾ! ಹಾ! ಮುರಾರಿಪಂತನು ವಿಶ್ವಾಸರಾಯನಿಗೆ ಅಪ್ರಸ್ತುತವಾಗಿ ಮಾಡಿದ ಪ್ರಶ್ನದ ಕಾರಣವು ಈಗ ಗೊತ್ತಾಯಿತು. ಯಾವ ರೀತಿಯಿಂದಾದರೂ ವಿಶ್ವಾಸರಾಯನನ್ನು ಮಾತಿನಲ್ಲಿ ಹಿಡಿಯುವದೇ ಇವನ ಮುಖ್ಯ ಉದ್ದೇಶವಿದ್ದಂತೆ ಕಂಡುಬರುತ್ತದೆ, ಎಂದು ಅನ್ನುವಷ್ಟರಲ್ಲಿ,

ಮುರಾರಿ—ಒಳ್ಳೇದು; ನೀವು ನಿಮ್ಮ ಚಿಗಪ್ಪನನ್ನು ಕೊಂದ ಪಿಸ್ತೂಲನ್ನು ಎಲ್ಲಿ ಕೊಂಡಿರಿ?

ಈ ಪ್ರಶ್ನವನ್ನು ಕೇಳುವಾಗ ಗಣಪತರಾಯನು ವಿಶ್ವಾರಾಯನ ಮುಖಮುದ್ರೆಯನ್ನು ಒಂದೇಸಮನೆ ನೋಡುತ್ತಿದ್ದನು, ಆದರೆ ಈ ಪ್ರಶ್ನದಿಂದ ವಿಶ್ವಾಸರಾಯನಿಗೆ ಯಾವ ಪ್ರಕಾರದ ಆಶ್ಚರ್ಯವೂ ಅನ್ನಿಸಲಿಲ್ಲ. ಅವನು "ಅದು ಬಹುದಿವಸದಿಂದ ನನ್ನ ಹತ್ತರನೇ ಇತ್ತು," ಎಂದು ಸ್ವಾಭಾವಿಕವಾಗಿ ಹೇಳಿಬಿಟ್ಟನು.

ಮುರಾರಿ—ಏನಂದಿರಿ? ಅದುನಿಮ್ಮ ಹತ್ತರವೇ ಇತ್ತೆ?" ಹಾಗಾದರೆ ಸದ್ಯಕ್ಕೆ ಅದು ಎಲ್ಲಿ ಅದೆ?

ವಿಶ್ವಾಸ—ಖೂನುಮಾಡುವದಾದ ಕೂಡಲೆ ಅಂದೇ ಅದನ್ನು ಸಮುದ್ರದಲ್ಲಿ ಬಿಸಾಟಿಬಿಟ್ಟೆನು.

ಮುರಾರಿ—ಒಳ್ಳೇದು, ನೀವು ನಿಮ್ಮ ಕಕ್ಕನನ್ನು ಕೊಲ್ಲಲಿಕ್ಕೆ ಹೋಗುವಾಗ ಸಂಗಡ ನಾಯಿಯನ್ನು ಯಾಕೆ ಒಯ್ದಿದ್ದಿರಿ? ನೀವು ನಾಯಿಯನ್ನು ಒಯ್ದ ಸಂಗತಿಯು ನಮಗೆ ಗೊತ್ತಾಗಿದೆ.

ಈ ಮಾತು ಕೇಳಿದ ಕೂಡಲೆ ವಿಶ್ವಾಸರಾಯನ ಮುಖಚರ್ಯವು ಬದಲಾಯಿತು. ಅವನು ತುಸುಹೊತ್ತು ಏನೂ ಮಾತಾಡದೆ ತನ್ನ ಮನದೊಳಗೆ ಆಲೋಚನೆಮಾಡಿ—ನಾನು ಈಗ ನಿಮಗೆ ಏನೂ ಹೇಳಲಾರೆನು. ಸದ್ಯಕ್ಕೆ ನೀವು ಇಲ್ಲಿಂದ ಹೊರಟು ಹೋಗಿರಿ, ನೋಡುವಾ! ಕೆಲಹೊತ್ತಿನ ವರೆಗೆ ನನ್ನೊಬ್ಬನನ್ನೇ ಸಮಾಧಾನದಿಂದ ಮಲಗಗೊಟ್ಟರೆ, ನಿಮ್ಮ ಉಪಕಾರವನ್ನು ಸ್ಮರಿಸುತ್ತೇನೆ, ಅಂದನು.

ಇನ್ನು ಹೆಚ್ಚು ಪೃಚ್ಛಾ ಪೃಚ್ಛ ಮಾಡುವದರಲ್ಲಿ ಏನೂ ಅರ್ಥವಿಲ್ಲೆಂದು ಮನಗಂಡು, ಮುರಾರಿಪಂತನು ಆ ಕಟಾಂಜನದಿಂದ ಹೊರಬಿದ್ದು ಪೊಲೀಸ

ಚೌಕಿಯ ಅವಾರಗೋಡೆಯ ಹೊರಗೆ ಬಂದು ನಿಂತನು. ಆಗ ಗಣಪತರಾಯನಿಗೆ ಸುಮ್ಮನಿರುವದಾಗಲಿಲ್ಲ. ಅವನು ತನ್ನ ಎಡಗೈಯನ್ನು ಮುರಾರಿಪಂತನ ಹೆಗಲಮೇಲೆ ಇಟ್ಟು, "ಈಗ ನಿಮ್ಮ ಮನಸ್ಸಿಗೆ ಏನುಹೊಳೆಯುತ್ತದೆ? ಇದೇ ಈಗ ವಿಶ್ವಾಸರಾಯನನ್ನು ನೀವು ಕೇಳಿದಿರಷ್ಟೇ ಅವನು ತಾನೇ ತನ್ನ ಕಕ್ಕನನ್ನು ಕೊಂದೆನೆಂದು ಹೇಳುತ್ತಾನೆ; ಆದರೆ ಯಾವ ಆಯುಧದಿಂದ ಕೊಲೆಯಾಗಿದೆ ಎಂಬದು ಸಹ ಅವನಿಗೆ ಗೊತ್ತು ಇಲ್ಲ. ಆ ಕಾಲಕ್ಕೆ ನೀವು ಆತನಿಗೆ ಕೇಳಿದ ಪಿಸ್ತೂಲಿನ ಪ್ರಶ್ನವು ಬಹಳ ಚಾತುರ್ಯದ್ದು. ಈ ಪ್ರಶ್ನದಿಂದ ಅವನು ಕೂಡಲೆ ಮಾತಿನಲ್ಲಿ ಸಿಕ್ಕನು. ಅವನು ಕೊಟ್ಟ ಉತ್ತರಗಳಿಂದ ಅವನು ಕೊಂದವನಲ್ಲೆಂಬದು ಸಹಜವು. ನಿಜವಾಗಿ ಅವನೇ ಕೊಂದವನಾಗಿದ್ದರೆ, ಕಠಾರಿಯಿಂದ ಇರಿದು ಕೊಂದದ್ದನ್ನಾಗಲಿ, ಪಿಸ್ತೂಲು ಹಾರಿಸಿ ಕೊಂದದ್ದನ್ನಾಗಲಿ ಕೂಡಲೆ ಹೇಳುತ್ತಿದ್ದನು, ಎಂದು ಕೇಳಿದನು.

ಅದಕ್ಕೆ ಪ್ರತ್ಯುತ್ತರವಾಗಿ ಮುರಾರಿಪಂತನು—ಅಹುದು, ನೀವನ್ನುವದು ನಿಜವು; ಆದರೆ ಆ ಮಾತು ನಾವು ಆಡಿ ಏನು ಪ್ರಯೋಜನವು? ನನ್ನ ಈ ಉದ್ಯೋಗದಲ್ಲಿ ಎಂತೆತಹ ಮೋಸಗಾರರು ನನಗೆ ಗಂಟುಬಿದ್ದಿರುವರೆಂದರೆ, ಅವರ ಒಂದೊಂದು ಕೃತಿಗಳನ್ನೂ ಮಾತುಗಳನ್ನೂ ಬಣ್ಣಿಸಲಳವಲ್ಲ. ಇನ್ನು ಇದು ಸಾಕು. ನಡೆಯಿರಿ ಹೊತ್ತಾಯಿತು, ಮನೆಗೆ ಹೋಗೋಣ. ಇಂದಿನ ನೀವು ನಮ್ಮ ಮನೆಯಲ್ಲಿಯೇ ಉಣ್ಣಿರಿ. ನಾಳೆ ಬೆಳಿಗ್ಗೆ ಮತ್ತೆ ಈ ಖಟ್ಲೆಯ ಬೆನ್ನು ಹತ್ತಬೇಕಾಗಿರುವದು, ಎಂದನು. ಇಷ್ಟರಲ್ಲಿ ಹತ್ತು ಬಡೆಯಿತು. ಕೂಡಲೆ ಅವರಿಬ್ಬರೂ ಕೂಡಿ ಒಂದು ವಿಕ್ಟೋರಿಯಾ ಗಾಡಿಯನ್ನು ಬಾಡಿಗೆ ಮಾಡಿಕೊಂಡು ತಮ್ಮ ಬಿಡಾರಕ್ಕೆ ಬಂದರು.

---

೮ನೆಯ ಪ್ರಕರಣ.

## ವಿಶ್ವಾಸರಾಯನೇ ಕೊಲೆ ಮಾಡಿರಬಹುದೇನು?

ಆಗ ಅವರ ವಠಾರದಲ್ಲಿ ನಾಲ್ಕೂಕಡೆಗೆ ನಿಃಶಬ್ದವಾಗಿತ್ತು. ಮುರಾರಿಪಂತನು ತನ್ನ ಮನೆಯ ಬಾಗಿಲಬಳಿಯಲ್ಲಿ ಬಂದು "ಬಾಗಿಲತೆರೆ" ಎಂದು ಸೂಚಿಸುವ ಚಿಟಿಕೆಗಳನ್ನು ಬಾಗಿಲಕ್ಕೆ ಬಾರಿಸಿದನು. ಅವನ ಹೆಂಡತಿಯು ಕೂಡಲೆ ಬಾಗಿಲು ತೆರೆದಳು. ಗಣಪತರಾಯನೂ ತನ್ನ ಕೋಣೆಯ ಬಾಗಿಲು ತೆರೆದು ಅಂಗಿ ರುಮಾಲುಗಳನ್ನು ತೆಗೆದಿಟ್ಟು ಮುರಾರಿಪಂತನ ಮನೆಗೆ ಹೋದನು. ಆಗ ಅವನು ಸ್ನಾನಮಾಡುತ್ತಿದ್ದನು; ಅವನ ಹೆಂಡತಿಯು ಎರಡು ತಾಟುಗಳನ್ನು ಬಡಿಸಿ ಸಿದ್ಧಮಾಡುತ್ತಿದ್ದಳು. ಪ್ರೇತ ಸ್ಪರ್ಶವಾದಕಾರಣ, ಮುರಾರಿಪಂತನು ಈ ಹೊತ್ತಿನಲ್ಲಿ ಸ್ನಾನ ಮಾಡಿದಂತೆ ತೋರಿತು. ಗಣಪತರಾಯನು ಮೆಡಿಕಲ್ ಕಾಲೇಜದಲ್ಲಿ ಸೇರಿದಂದಿನಿಂದ ಈ ವಿಧಿನಿಷೇಧಗಳನ್ನೆಲ್ಲ ಬಿಟ್ಟು ಬಿಟ್ಟಿದ್ದನು. ಮುರಾರಿಪಂತನ ಸ್ನಾನವಾದಮೇಲೆ, ಅವರಿಬ್ಬರೂ ಊಟಮಾಡಿದರು. ಊಟದ ಕಾಲಕ್ಕೆ ಒಬ್ಬರೂ ಪಿಟ್ಟೆಂದು ಮಾತಾಡಲಿಲ್ಲ. ಊಟಮುಗಿದ ಮೇಲೆ ಚುಟ್ಟಾ ಸೇದಿ, ಗಣಪತರಾಯನು ತನ್ನ ಕೋಣೆಗೆ ಹೊರಟನು. ಆಗ ಮುರಾರಿಪಂತನು-- ನಾಳೆ ಬೆಳಿಗ್ಗೆ ಒಂಬತ್ತು ಗಂಟೆಯ ಸುಮಾರಕ್ಕೆ ನಿಮ್ಮನ್ನು ಕರೆಯುತ್ತೇನೆ. ಅಷ್ಟು ಹೊತ್ತಿಗೆ ನೀವು ಊಟಮಾಡಿ ಸಿದ್ಧವಾಗಿರಿ. ನಾನು ಬಹಳ ದಣಿದಿರುವೆನು. ಈಗ ಮಲಗಿಕೊಳ್ಳುತ್ತೇನೆ. ನೀವಾದರೂ ದಣಿದಿರಬಹುದು. ಈಗ ಸುಖದಿಂದ ನಿದ್ರೆ ಮಾಡಿ ನಾಳಿನ ಕೆಲಸಕ್ಕೆ ಸಿದ್ಧರಾಗಿರಿ, ಎಂದು ಅಂದನು.

ಗಣಪತರಾಯನು ತನ್ನ ಕೋಣೆಗೆ ಬಂದು ಹಾಸಿಗೆ ಹಾಸಿಕೊಂಡು ತನ್ನ ಮನಸ್ಸಿನೊಳಗೆ—ಸಾಯಂಕಾಲದ ನಾಲ್ಕು ಗಂಟೆಯಿಂದ ಈ ಹೊತ್ತಿನವರೆಗೆ ಚಮತ್ಕಾರದ ಹಲವು ಸಂಗತಿಗಳನ್ನು ನೋಡಿಯೂ, ಕೊಲೆಯನ್ನು ಯಾರು ಮಾಡಿದರೆಂಬದು ಇನ್ನೂ ಸರಿಯಾಗಿ ತಿಳಿಯದೆಯೂ ಇರಲು, ಮುರಾರಿಪಂತನಿಗೆ ಇಂದು ನಿದ್ದೆ ಹೇಗೆಬಂದಿದ್ದೀತು. ಎಂದು

ಆಲೋಚನೆಮಾಡುತ್ತ ಅಚ್ಚರಿಪಟ್ಟನು; ಆದರೆ ಬಹು ದಿವಸದಿಂದ ಗುಪ್ತ [ಡಿಟೆಕ್ಟಿವ್ಹ] ಪೊಲೀಸರ ಉದ್ಯೋಗದಲ್ಲಿದ್ದವರು, ಹಗಲು ಕಂಡು ಕೇಳಿದ ಸಂಗತಿಗಳನ್ನೆಲ್ಲ ರಾತ್ರಿಯಲ್ಲಿ ಮರೆತು ಬಿಡಲಿಕ್ಕೆ ಅಭ್ಯಾಸಮಾಡಿರುತ್ತಾರೆ. ಅದೇ ಅಭ್ಯಾಸವು ಮುರಾರಿಪಂತನಿಗಾದರೂ ಆಗಿರುವದೆಂಬದನ್ನು ಕಾಲಾಂತರದಿಂದ ಗಣಪತರಾಯನು ಅರಿತನು. ಈವಿಚಾರವು ಅವನ ಮನಸಿನಲ್ಲಿ ಬರಲಿಕ್ಕೆ ಕಾರಣವೇನಂದರೆ,—ಅವನು ಹಾಸಿಗೆಯ ಮೇಲೆ ಬಿದ್ದುಕೊಂಡು ಎಷ್ಟು ಹೊತ್ತು ಹೊರಳಾಡಿದರೂ ಅವನಿಗೆ ನಿದ್ದೆ ಹತ್ತಲಿಲ್ಲ. ನಿದ್ದೆಬಾರದಂತಾದರೆ, ಅವನು ತನ್ನ ಅಭ್ಯಾಸದ ಪುಸ್ತಕಗಳಲ್ಲಿ ಗಡಚಾದದ್ದೊಂದುಪುಸ್ತಕವನ್ನು ತೆಗೆದುಕೊಂಡು ಓದತೊಡಗುತ್ತಿದ್ದನು. ಅದರಿಂದ ಅವನಿಗೆ ತತ್ಕಾಲಕ್ಕೆ ನಿದ್ದೆ ಬರುತ್ತಿತ್ತು; ಆದರೆ ಈ ಹೊತ್ತು ಆ ನಿಶ್ಚಿತವಾದ ಉಪಾಯವು ಸಹ ಉಪಯೋಗಬೀಳಲಿಲ್ಲ. ಸಾಯಂಕಾಲದಿಂದ ನಡೆದ ಎಲ್ಲ ಸಂಗತಿಗಳು ಮೂರ್ತಿಮಂತವಾಗಿ ಅವನ ಕಣ್ಣು ಮುಂದೆ ಕಟ್ಟಿದವು. ವಿಶ್ವಾಸರಾಯನು ನಿರಪರಾಧಿಯೆಂದು ಅವನ ಮನೋದೇವತೆಯು ಹೇಳಹತ್ತಿತ್ತು. ಯಾಕಂದರೆ, ಗಿರಗಾಂವ ಪೋಲೀಸಚೌಕಿಯಲ್ಲಿದ್ದ ವಿಶ್ವಾಸರಾಯನ ಸ್ಥಿತಿಯನ್ನು ನೋಡಿ, ಎಂಥ ಕಲ್ಲೆದೆಯ ಮನುಷ್ಯನಿಗೂ ಅವನ ಬಗ್ಗೆ ಅಂತಃಕರಣವು ಹುಟ್ಟದೆ ಇರಲಿಕ್ಕಿಲ್ಲ. ಅವನು ನಿರಪರಾಧಿಯಾಗಿದ್ದು, ನಿಷ್ಕಾರಣವಾಗಿ ಅವನನ್ನು ಪ್ರತಿಬಂಧದಲ್ಲಿಟ್ಟು, ಸೆರೆಮನೆಯ ಕಷ್ಟಗಳನ್ನು ಅನುಭೋಗಿಸಲಿಕ್ಕೆ ಹಚ್ಚಿರುವ ಸಂಗತಿಯನ್ನು ನೆನಿಸಿ ಗಣಪತರಾಯನಿಗೆ ಬಹಳ ದುಃಖವಾಯಿತು; ಬರಬರುತ್ತ ಅವನ ಮನಸ್ಸಿನಲ್ಲಿ ಇನ್ನೊಂದು ಸಂಶಯವು ಉದ್ಭವಿಸಿತು. ಅದಾವದೆಂದರೆ—ವಿಶ್ವಾಸರಾಯನು ಒಂದುವೇಳೆ ನಿರಪರಾಧಿಯಾಗಿದ್ದರೆ, ಅವನು ತಾನಾಗಿಯೇ ಈ ಅಪರಾಧವನ್ನು ಯಾಕೆ ಒಪ್ಪಿಕೊಳ್ಳುತ್ತಿದ್ದನು? ಈ ವಿಚಾರದಲ್ಲಿ ಮಾತ್ರ ಅವನಿಗೇನೂ ಸೂಚಿಸಲಿಲ್ಲ. ಅದರಿಂದ ಅವನ ಮನಸ್ಸು ಉದಾಸೀನವಾಯಿತು. ನಿದ್ದೆಹತ್ತಬೇಕೆಂದು ಮಾಡಿದ ಹಲವು ಪ್ರಯತ್ನಗಳು ನಿಷ್ಫಲವಾದವು. ಆದರೆ ಬೆಳಗು ಮುಂಜಾನೆ ೫ ಗಂಟೆಯ ಸುಮಾರಿಗೆ ಅವನಿಗೆ ಒಂದು ಜಂಪು ಹತ್ತಿತು. ಆದರೂ ಗಡದ್ದಾಗಿ ನಿದ್ದೆ ಬರಲಿಲ್ಲ. ಆಗ ಅವನು ತರತರದ ಕನಸುಗಳನ್ನು ಕಂಡನು. ಅವೆಲ್ಲ ನಿನ್ನೆ ಆದ ಕೊಲೆಗೆ ಸಂಬಂಧಿಸಿ

ದವೇ ಇದ್ದವು. ಮುಂಜಾನೆ ಒಂಬತ್ತು ಗಂಟೆಯ ಸುಮಾರಿಗೆ ಮುರಾರಿಪಂತನು ಗಣಪತರಾಯನನ್ನು ಕರೆದನು. ಇಷ್ಟು ಹೊತ್ತಿನವರೆಗೆ ಗಣಪತರಾಯನು ಹಾಸಿಗೆಯ ಮೇಲೆಯೇ ಬಿದ್ದುಕೊಂಡಿದ್ದನು. ಮುರಾರಿಪಂತನ ಧ್ವನಿಯನ್ನು ಕೇಳಿ ಅವನು ಅಡಬಡಿಸಿಕೊಂಡು ಎದ್ದು ಹೊರಗೆ ಬಂದನು. ಬಳಿಕ ತನ್ನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ರಾತ್ರಿಯಲ್ಲಿ ನಡೆದ ಎಲ್ಲ ಸಂಗತಿಗಳನ್ನು ಮುರಾರಿಪಂತನಿಗೆ ತಿಳಿಸಲು, ಅವನು— ಗಣಪತರಾಯರೆ, ನಿಮಗೆ ಇನ್ನೂ ಈ ವಿಷಯದ ಅನುಭವವಿಲ್ಲ. ಅದರಿಂದಲೇ ನಿಮ್ಮ ಸ್ಥಿತಿಯು ಹೀಗಾಗಿರುತ್ತದೆ. ನಾನು ಕೆಲಕೆಲವು ಕೊಲೆಗಳನ್ನು ಪ್ರತ್ಯಕ್ಷ ನೋಡಿದ್ದೇನೆ. ಅವುಗಳಲ್ಲೊಂದರ ಸಂಗತಿಯನ್ನು ಹೇಳಿದರೆ, ನಿಮಗೆ ನಿಶ್ಚಯವಾಗಿ ಹುಚ್ಚುಹಿಡಿಯಬಹುದು. ನಿನ್ನಿನ ಕೊಲೆಯು ಅವುಗಳ ಮುಂದೆ ಏನೂ ಅಲ್ಲ, ಎಂದು ಹೇಳಿದನು.

ಬಳಿಕ ಗಣಪತರಾಯನು ಕ್ಲಬ್ಬಿಗೆ ಊಟಕ್ಕೆ ಹೋದನು. ರಾತ್ರಿ ಕಣ್ಣಿಗೆ ನಿದ್ದೆ ಇಲ್ಲದ್ದರಿಂದ ಕಣ್ಣು ಉರಿಯುತ್ತಿದ್ದವು. ಹಾಗೂ ಹೀಗೂ ಅವನು ಅಲ್ಲಿ ಊಟ ತೀರಿಸಿಕೊಂಡು ತನ್ನ ಕೋಣೆಗೆ ಬರುವಷ್ಟರೊಳಗೆ ಮುರಾರಿಪಂತನು ಅವನ ದಾರೀ ಕಾಯುತ್ತ ನಿಂತುಕೊಂಡಿದ್ದನು. ಆ ಕಾಲದ ಮುರಾರಿಪಂತನ ಪೋಷಾಕು ನಿತ್ಯದಂತೆ ಇರದೆ, ಶ್ರೀಮಂತರ ತರಹದ್ದಿತ್ತು. ಅವನು ಹೀಗೆ ಪೋಷಾಕುಮಾಡುವ ಕಾರಣವು ಗಣಪತರಾಯನಿಗೆ ಗೊತ್ತಾಗಲಿಲ್ಲ. ಆದರೂ ಅವನು ಆಗ ಆ ಸಂಬಂಧದಿಂದ ಚಕಾರಶಬ್ದವನ್ನು ಸಹ ಮಾತಾಡಲಿಲ್ಲ. ಯಾಕಂದರೆ, ಪರಿಣಾಮದಲ್ಲಿ ಇದರ ಗೂಢವು ತನಗೆ ಗೊತ್ತಾಗುವದೆಂಬ ನಂಬಿಗೆಯು ಅವನಿಗಿತ್ತು. ತಾನು ತನ್ನ ನಿತ್ಯದ ಪೋಷಾಕು ಹಾಕಿಕೊಂಡು ಮುರಾರಿಪಂತನ ಸಂಗಡ ಹೋಗಲಿಕ್ಕೆ ಸಿದ್ಧನಾದನು. ಬಳಿಕ ಇಬ್ಬರೂ ಕೂಡಿ ತಮ್ಮ ವಠಾರದಿಂದ ಹೊರಬಿದ್ದು, ಬೇಲಾಸಿಸ್ ರೋಡದ ಹತ್ತರ ನಿಂತು, ಪಾಯಧುಣಿಯ ಕಡೆಗೆ ಹೋಗುವ ಟ್ರಾಮಗಾಡಿಯ ಹಾದೀ ನೋಡಹತ್ತಿದರು.

ಐದು ಮಿನಿಟು ನಿಂತಿರುವಷ್ಟರಲ್ಲಿ ಬಾಯಖಳಾದಿಂದ ಟ್ರಾಮಗಾಡಿಯು ಬಂತು. ಕೂಡಲೆ ಅವರಿಬ್ಬರು ಅದನ್ನು ಹತ್ತಿದರು. ಅದು ಪಾಯಧುಣಿ, ಕಾಳಬಾದೇವೀರೋಡ, ಮುನಿಸ್ಕೂಲ, ಆಗಸನಕೆರೆ, ಇವುಗಳ

ಮೇಲೆ ಹಾಯ್ದು ಪಾಲವರ್ಓಡಕ್ಕೆ ಬಂತು. ಈ ಓಣಿಯಲ್ಲಿಯೇ ವಿಶ್ವಾಸರಾಯನ ಅಂಗಡಿಯು ಇತ್ತು. ಟ್ರಾಮುಗಾಡಿಯು ಠಾಕುರದ್ವಾರಕ್ಕೆ ಬಂದಕೂಡಲೆ ಮುರಾರಿರಾಯನೂ, ಅವನ ಬೆನ್ನ ಹಿಂದಿಂದೇ ಗಣಪತರಾಯನೂ ಗಾಡಿಯಿಂದ ಇಳಿದು, ಅಲ್ಲಿಯೇ ಸಮೀಪದಲ್ಲಿದ್ದ ಒಂದು ಅತ್ತರ(ಸುಗಂಧದಎಣ್ಣೆ)ಮಾರುವವನ ಅಂಗಡಿಯನ್ನು ಹೊಕ್ಕರು. ಮುರಾರಿಪಂತನ ಪೋಷಾಕು ಶ್ರೀಮಂತರ ತರಹದ್ದಿದ್ದದ್ದರಿಂದ ಶಿಷ್ಟಾಚಾರಕ್ಕನುಸರಿಸಿ ಅಂಗಡಿಕಾರನು ಅವರನ್ನು ಸನ್ಮಾನಪೂರ್ವಕವಾಗಿ ಬರಮಾಡಿಕೊಂಡು, ಉಚಿತಾಸನದ ಮೇಲೆ ಕುಳ್ಳಿರಿಸಿದನು.

ಆಗ ಮುರಾರಿಪಂತನು ಅಂಗಡಿಕಾರನನ್ನು ಕುರಿತು—"ನಾವು ಕೊಲ್ಲಾಪುರದ ಸುಖವಸ್ತುಗೃಹಸ್ಥರು, ಉತ್ತಮವಾದ ಅತ್ತರವನ್ನು ಕೊಳ್ಳುವವರಿದ್ದೇವೆ. ನಿಮ್ಮಲ್ಲಿಯ ಉತ್ಕೃಷ್ಟವಾದ ಅತ್ತರಗಳನ್ನಷ್ಟೇ ತೋರಿಸಿರಿ" ಎಂದು ಸುಳ್ಳುಹೇಳಿ ಆ ಅಂಗಡಿಕಾರನಿಗೆ ಲಾಭದ ಆಶೆಯನ್ನು ಹಚ್ಚಿದನು. ಆ ಅಂಗಡಿಕಾರನು ಉತ್ತರಹಿಂದುಸ್ತಾನದವನು; ಜಾತಿಯಿಂದ ಮುಸಲ್ಮಾನನು; ನಿರುದ್ಯೋಗಿಗಳೂ, ಬರೇ ಅತ್ತರ ವಾಸನೆಯಿಂದಲೇ ತೃಪ್ತರಾಗುವವರೂ ಆದ ಬಹು ಜನರು ಈ ಅಂಗಡಿಯಲ್ಲಿ ಕೂಡಿ, ಓಣಿಯಲ್ಲಿ ನಡೆದ ಸಂಗತಿಗಳನ್ನು ಹರಟುತ್ತಾರೆಂಬ ಸಂಗತಿಯು ಮುರಾರಿಪಂತನಿಗೆ ಗೊತ್ತಿತ್ತು. ವಿಶ್ವಾಸರಾಯನ ಅಂಗಡಿಯು ಅದೇ ಓಣಿಯಲ್ಲಿ ಅಲ್ಲೇ ಸಮೀಪದಲ್ಲಿಯೇ ಇದ್ದದರಿಂದ, ಅಲ್ಲಿ ನೆರೆದ ಜನರ ಚರ್ಚೆಗೆ ವಿಶ್ವಾಸರಾಯನ ಸಂಗತಿಯೇ ಮುಖ್ಯವಿಷಯವಾಗಿತ್ತು. ಮುರಾರಿಪಂತನು ತನ್ನ ಗುರುತು ಮುಂದಿಗೆ ಹತ್ತದಂತೆ "ಈ ಅತ್ತರವು ಹೇಗೆ ತೊಲಿ? ಈ ಹೀನಾ ಅತ್ತರವನ್ನು ಹೇಗೆ ತೊಲಿ ಕೊಡುವಿರಿ? ಈ ಗುಲಾಬವು ಹಿರಿದಾಗಿರುತ್ತದೆ. ಇದರ ದಾರಣೆಯನ್ನು ಬಗೆ ಹರಿಸಿರಿ." ಎಂದು ಅನೇಕ ಪ್ರಶ್ನೆಗಳನ್ನು ಅಂಗಡಿಕಾರನಿಗೆ ಮಾಡುತ್ತ ಯಾರಿಗೂ ತಿಳಿಯಗೊಡದೆ ಅಲ್ಲಿ ನಡೆದ ಚರ್ಚೆಯಲ್ಲಿ ವಿಶ್ವಾಸರಾಯನ ವಿಷಯವಾಗಿ ತನಗೆ ಬೇಕಾಗಿರುವ ನಿಜವಾದ ಸಂಗತಿಯನ್ನು ಸಂಪಾದಿಸಿಕೊಂಡನು. ಅದರ ಸಾರಾಂಶವೇನಂದರೆ—ವಿಶ್ವಾಸರಾಯನು ಸುಶೀಲನೂ, ಪ್ರಾಮಾಣಿಕನೂ, ಬುದ್ಧಿವಂತನೂ ಇರುತ್ತಾನೆ. ವ್ಯಾಪಾರದಲ್ಲಿ ಅವನು ಏಳ್ಗೆಯನ್ನು ಹೊಂದಲೊಲ್ಲನು. ಇದ

ರಲ್ಲಿ ಅವನದೇನೂ ತಪ್ಪಿಲ್ಲ. ಖೊಟ್ಟಿ ಹರಳು ಕಲ್ಲುಗಳ ವ್ಯಾಪಾರಮಾಡು ವದೇ ಮೂಲತಃ ತಪ್ಪು. ಯಾಕಂದರೆ, ಈ ವ್ಯಾಪಾರದಿಂದ ಯಾರಿಗೂ, ಎಂದೂ ಲಾಭವಾಗಿಲ್ಲ. ಖೂನೀ ಖಟ್ಲೆಯಲ್ಲಿ ಅವನ ವಿಷಯವಾಗಿ ಸಂಶಯವುಳ್ಳವರಾಗಿ ನಿನ್ನೆ ಪೋಲೀಸರು ಅವನನ್ನು ಹಿಡಕೊಂಡು ಹೋಗಿರುತ್ತಾರೆ. ಇಂಥ ನೀಚ ಕೆಲಸವನ್ನು ಅವನು ಎಂದೂ ಮಾಡಲಾರನು. ಪೋಲೀಸರ ಈ ತಪ್ಪು ತಿಳಿವಳಿಕೆಯು ಅವರಿಗೆ ಬೇಗನೇ ಗೊತ್ತಾಗಿ, ಅವನು ಬಿಡುಗಡೆ ಹೊಂದಬಹುದು. ಇತ್ಯಾದಿ.

ಇಷ್ಟಾದ ಬಳಿಕ ಮುರಾರಿಪಂತನು ಮತ್ತೆ ಎರಡು ಮೂರು ಬಗೆಯ ಅತ್ತರದ ಎಣ್ಣೆಗಳನ್ನು ನೋಡಿ ಮಾದರಿಗಾಗಿ ಅತ್ತರಗಳಲ್ಲಿ ಎದ್ದಿದ ಅರಳೆಯನ್ನು ಕಿವಿಯಲ್ಲಿಟ್ಟುಕೊಂಡು, "ನಾವು ಸಾಯಂಕಾಲಕ್ಕೆ ಬಂದು ಕೆಲವು ಮಾಲು ಕೊಳ್ಳುತ್ತೇವೆ." ಎಂಬ ಒಣ ಆಶೆಯನ್ನು ತೋರಿಸಿ, ಅಲ್ಲಿಂದ ಹೊರಟನು. ಅಂಗಡಿಕಾರನು ಅವನನ್ನು ಅಂಗಡಿಯ ಬಾಗಿಲು ಹೊರತನಕ ಕಳಿಸಲಿಕ್ಕೆ ಬಂದು, ತಿರುಗಿ ಹೋಗುವಾಗ ನೀವು ಸಾಯಂಕಾಲಕ್ಕೆ ಬಂದರೆ, ಈಗ ತೋರಿಸಿದ್ದಕ್ಕಿಂತ ಹಿರಿದಾದ ಕೆಲವು ಎಣ್ಣೆಗಳನ್ನು ತೋರಿಸುತ್ತೇನೆಂದು ಹೇಳಿದನು.

ಅಂಗಡಿಕಾರನು ತಿರುಗಿ ಹೋದ ಮೇಲೆ "ಇನ್ನು ಮೇಲೆ ನಿನ್ನ ಅಂಗಡಿಗೆ ನಾವು ಬಂದರಷ್ಟೇ?" ಎಂದು ಮೆಲ್ಲನೆ ಮುರಾರಿಪಂತನು ಅಂದನು. ಈ ಮಾತಿನಿಂದ ಗಣಪತರಾಯನಿಗೆ ಅವನ ಶ್ರೀಮಂತಿಕೆಯ ಪೋಷಾಕಿನ ಉದ್ದೇಶವೂ, ಒಬ್ಬ ದೊಡ್ಡ ಗಿರಾಕಿಯ ಹಾಗೆ ಆಡಿದ ಬಡಿವಾರದ ಮಾತು ಕಥೆಗಳ ಧೋರಣವೂ ಈಗ ತಿಳಿದವು. ಇಷ್ಟು ಹೊತ್ತಿನವರೆಗೆ ಮುರಾರಿಪಂತನು ಅತ್ತರದವರ ಅಂಗಡಿಯನ್ನು ಹೊಕ್ಕ ಕಾರಣವು ಗಣಪತರಾಯನ ಮನವರಿಕೆಯಾಗಿದ್ದಿಲ್ಲ. ಆಗ ಅವನು ಒಳ್ಳೇ ಆನಂದದಿಂದ—ಸೈ, ಸೈ, ಮುರಾರಿಪಂತರೇ, ನಿಮ್ಮ ಚಾತುರ್ಯವನ್ನು ಎಷ್ಟು ಹೊಗಳಿದರೂ ಸಾಲದು, ಎಂದು ಅಂದನು.

ಅದಕ್ಕೆ ಪ್ರತ್ಯುತ್ತರವಾಗಿ ಮುರಾರಿಪಂತನು ನಸುನಕ್ಕು—ಇದು ನಮ್ಮ ನಿತ್ಯದ ಕೆಲಸವು. ನಾವು ಯಾವನೊಬ್ಬನ ವಿಷಯವಾಗಿ ಜನರ ಅಭಿಪ್ರಾಯವನ್ನು ಗುಪ್ತವಾಗಿ ತಿಳಕೊಳ್ಳಬೇಕಾದರೆ, ಹೀಗೆಯೇ ಮಾಡು

ತ್ತಿರುತ್ತೇವೆ. ಒಂದು ವೇಳೆ ನಾನು ಪೋಲೀಸರ ಡ್ರೆಸ್ಸಿನಿಂದ ಇಲ್ಲಿಗೆ ಬಂದಿದ್ದರೆ, ವಿಶ್ವಾಸರಾಯನ ವಿಷಯಕವಾದ ಈ ನಿಜವಾದ ಸಂಗತಿಗಳು ಬೈಲಿಗೆ ಬರುತ್ತಿದ್ದಿಲ್ಲ. ಅದಂತಿರಲಿ; ವಿಶ್ವಾಸರಾಯನ ವಿಷಯವಾಗಿ ಜನರ ಅಭಿಪ್ರಾಯವು ಹೇಗದೆ? ಎಂಬದು ಈಗ ನಮಗೆ ಗೊತ್ತಾಯಿತು. ಅವನು ನಿರಪರಾಧಿಯೆಂದು ನಾವು ಮೊದಲೇ ನಿರ್ಣಯಿಸಿರುತ್ತೇವೆ. ಅದಕ್ಕೆ ಅನು ಕೂಲವಾಗಿಯೇ ನೆರೆಹೊರೆಯವರ ಅಭಿಪ್ರಾಯವೂ ಉಂಟು. ಇನ್ನು ನಾವು ವಿಶ್ವಾಸರಾಯನ ಹೆಂಡತಿಗೆ ಭೆಟ್ಟಿಯಾಗೋಣ. ಅಕೋ, ಅದೇ ವಿಶ್ವಾಸರಾಯನ ಅಂಗಡಿಯು. ಮೇಲೆ ನೋಡಿರಿ, ಎಂಥ ದೊಡ್ಡ ಹಲಗೆ ಯನ್ನು ಬರೆದು ಹಚ್ಚಿದ್ದಾರೆ. ಅಂಗಡಿಗೆ ಕೀಲಿ ಹಾಕಿದೆ. ಒಳಮಗ್ಗಲು ಅವನ ಮನೆಯದೆ. ಅಲ್ಲಿ ಹೋದರೆ ವಿಶ್ವಾಸರಾಯನ ಹೆಂಡತಿಯಾದ ಕಮಲಾ ಬಾಯಿಯು ಭೆಟ್ಟಿಯಾಗುವಳು. ನಡೆಯಿರಿ. ಹಾಗಾದರೆ, ನಾವು ಅಲ್ಲಿಗೇ ಹೋಗೋಣ, ಎಂದು ಇಬ್ಬರೂ ಹೊರಟರು.

ಅಂಗಡಿಯ ಬಳಿಗೆ ಹೋಗಿ ಅಲ್ಲಿ ತುಸು ಹೊತ್ತು ಸಹಜವಾಗಿ ನಿಲ್ಲು ವಂತೆ ನಿಂತು ಒಳಗೆ ಏನಾದರೂ ಮಾತು ಕಥೆಗಳು ನಡೆದಿರುವವೋ ಹೇಗೆ ಎಂಬದನ್ನು ಕಿವಿಗೊಟ್ಟು ಕೇಳಿ, ಬಳಿಕ ಒಳಗೆ ಹೊಕ್ಕರು. ಒಳಂಗಳದಲ್ಲಿ ಇವರ ಸ್ವಾಗತಕ್ಕಾಗಿ ನಾಯಿಕರು ಸಜ್ಜಾಗಿಯೇ ನಿಂತಿದ್ದರು. ಇವರಿಬ್ಬರು ಹೊಸ್ತಿಲಿನಲ್ಲಿ ಕಾಲಿಟ್ಟಕೂಡಲೆ, ಅದು ತನ್ನ ಕರ್ಕಶಧ್ವನಿಯಿಂದ "ಒವ್ ಒವ್" ಎಂದು ವಿಃತಿವಿೂರಿ ಒದರಹತ್ತಿತು. ಅಲ್ಲಿ ಅದನ್ನು ಬಲವಾದ ಸರ ಪಳಿಯಿಂದ ಕಂಬಕ್ಕೆ ಕಟ್ಟಿಹಾಕಿದ್ದರು. ಅದರಿಂದ ಬೊಗಳುವದಕ್ಕಿಂತ ಹೆಚ್ಚಿನ ಕಾರ್ಯವನ್ನು ಮಾಡಲು ಅದಕ್ಕೆ ಆಗ ಸಾಮರ್ಥ್ಯವಿದ್ದಿಲ್ಲ. ನಾಯಿಯ ಬೊಗಳುವಿಕೆಯನ್ನು ಕೇಳಿ ೧೫-೧೬ವರ್ಷದ ಒಬ್ಬ ತರುಣನು ಮನೆಯೊಳ ಗಿಂದ ಹೊರಗೆ ಬಂದನು. ಅವನಿಗೆ, ಕಮಲಾಬಾಯಿಯವರು ಮನೆಯಲ್ಲಿ ಇರುವರೋ? ಎಂದು ಮುರಾರಿಪಂತನು ಪ್ರಶ್ನಮಾಡಿದನು.

ತರುಣ—ಒಹೋ! ಇರುವರು.

ಇಷ್ಟರಲ್ಲಿ ಹೊರಗೆ ಯಾರು ಬಂದಿರುವರೆಂಬದನ್ನು ನೋಡುವದಕ್ಕಾಗಿ ಕಮಲಾಬಾಯಿಯು ತಾನಾಗಿಯೇ ಹೊರಗೆ ಬಂದಳು. ಆಕೆಯನ್ನು ನೋಡಿ ಮುರಾರಿಪಂತನು— "ಕಮಲಾಬಾಯಿ" ಎಂಬವರು ನೀವೇ ಏನು?

ಎಂದು ಪ್ರಶ್ನ ಮಾಡಿದನು.

ಕಮಲಾ(ವಿನಯದಿಂದ)—ಅಹುದು, ನಾನೇ ಕಮಲಾಬಾಯಿಯು.

ಮುರಾರಿ—ನಿನ್ನಿನ ದಿವಸ ನಿಮ್ಮ ಯಜಮಾನರನ್ನು ಪೋಲೀಸರು ಹಿಡಕೊಂಡು ಹೋಗಿರುವರಷ್ಟೆ? ಆ ಸಂಬಂಧದಿಂದ ವಿಶೇಷ ಸಂಗತಿಗಳೇನಾದರೂ ಇದ್ದರೆ ತಿಳಕೊಳ್ಳುವದಕ್ಕಾಗಿ ನಾವು ಇಲ್ಲಿಗೆ ಬಂದಿದ್ದೇವೆ.

ಕಮಲಾ ( ಬಹು ದೀನಸ್ವರದಿಂದ )—ನನಗೆ ಯಾವ ಸಂಗತಿಯನ್ನು ಕೇಳುತ್ತೀರಿ? ಅವರನ್ನು ಒಯ್ದ ಕಡೆಗೆ ನನ್ನನ್ನೂ ಒಯ್ದರೆ, ನನ್ನ ಮೇಲೆ ನಿಮ್ಮ ಅನಂತ ಉಪಕಾರವಾಗುವದು. ಅವರ ದುಃಖಕ್ಕೆ ನಾನು ಪಾಲುಗಾರ್ತಿಯಾಗಿದ್ದೇನೆ. ತಿಳಿದು ನೋಡಿದರೆ ಅವರ ಕಡೆಗೆ ಏನೂ ತಪ್ಪಿಲ್ಲ. ಪೋಲೀಸರ ತಪ್ಪು ತಿಳುವಳಿಕೆಯಿಂದ ಅವರ ಮೇಲೆ ನಿಷ್ಕಾರಣವಾಗಿ ಅಪವಾದವು ಬಂದಿರುವದು.

ಮುರಾರಿ—ತಾಯೀ, ನಿಮ್ಮನ್ನು ಹಿಡಿದೊಯ್ಯಲಿಕ್ಕೆ ನಾವು ಬಂದವರಲ್ಲ. ವಿಶ್ವಾಸರಾಯನು ಖೂನು ಮಾಡಿಲ್ಲೆಂಬಂತೆ ನಮಗೂ ತೋರುತ್ತದೆ. ಅವನು ನಿರಪರಾಧಿಯೆಂಬದನ್ನು ಸಿದ್ಧಮಾಡಲಿಕ್ಕೆ ನಮಗೆ ಕೆಲವು ಸಂಗತಿಗಳು ಗೊತ್ತಾಗಬೇಕಾಗಿರುತ್ತವೆ. ಅವುಗಳನ್ನು ಅರಿತುಕೊಳ್ಳುವದಕ್ಕಾಗಿ ನಾವು ಇಲ್ಲಿಗೆ ಬಂದಿದ್ದೇವೆ. ನಾನು ಗುಪ್ತ ಪೋಲೀಸರ ಅಮಲದಾರನಿರುತ್ತೇನೆ.

ಕಮಲಾ—ಇಂದು ಮುಂಜಾನೆ ಒಬ್ಬ ಕೋರ್ಟಿನ ಶಿಪಾಯಿಯು ಬಂದು ನನಗೆ ಒಂದು ಸಮನಸ್ಸು ಕೊಟ್ಟು ಹೋಗಿರುತ್ತಾನೆ. ಅದರಲ್ಲಿ ನನಗೆ ಸಾಯಂಕಾಲದ ಮೂರು ಗಂಟೆಗೆ ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ಹಾಜರ ಇರುವ ಬಗ್ಗೆ ಹುಕುಮು ಕೊಡಲ್ಪಟ್ಟಿದೆ. ಮ್ಯಾಜಿಸ್ಟ್ರೇಟರು ನನ್ನನ್ನು ತಮ್ಮ ಕೋರ್ಟಿಗೆ ಕರೆಯಿಸುವ ಕಾರಣವೇನಿರಬಹುದೆಂದು ನಾನು ಮುಂಜಾನೆಯಿಂದ ವಿಚಾರಮಾಡಹತ್ತಿದ್ದೇನೆ.

ಮುರಾರಿ—ಮ್ಯಾಜಿಸ್ಟ್ರೇಟರು ನಿಮ್ಮ ಜವಾಬು ತೆಗೆದುಕೊಳ್ಳುವರು. ಮೂರು ಬಡಿಯಲಿಕ್ಕೆ ಇನ್ನೂ ಬಹಳ ಹೊತ್ತಿರುವದು. ಅಲ್ಲಿಯವರೆಗೆ ನಾನು ಕೆಲವು ಪ್ರಶ್ನಗಳನ್ನು ನಿಮಗೆ ಕೇಳುತ್ತೇನೆ. ನೀವು ಗೊತ್ತಿದ್ದಷ್ಟನ್ನು ನಿಜವಾಗಿ ಹೇಳಿರಿ. ಅವುಗಳಿಂದ ಬಹುಶಃ ನಿಮ್ಮ ಯಜಮಾನರು ಈ ಆರೋ-

ಪದಿಂದ ಬಿಡುಗಡೆಯಾಗುವ ಸಂಭವವಿದೆ. ಈಗ ನಿಮಗೆ ಬರಬಾರದಂಥ ಪ್ರಸಂಗವು ಬಂದಿರುತ್ತದೆ. ಈಶಚಿತ್ತಕ್ಕೆ ಉಪಾಯವಿಲ್ಲ. ಧೈರ್ಯದಿಂದ ಬಂದ ಸಂಕಟಗಳಿಗೆ ಎದೆಗೊಟ್ಟು ನಿಂತು, ಯೋಗ್ಯವಾದ ಪ್ರಯತ್ನಗಳನ್ನು ಮಾಡತಕ್ಕದ್ದು.

ಮುರಾರಿಪಂತನ ಈ ಮಾತುಗಳನ್ನು ಕೇಳಿ, ಕಮಲಾಬಾಯಿಯು ಕೆಲ ಹೊತ್ತು ಅವನನ್ನು ಟಕಮಕ ನೋಡುತ್ತ ನಿಂತುಕೊಂಡಳು. ಬಳಿಕ, ಬೇಕಾದದ್ದು ಕೇಳಿರಿ, ನಾನು ನಿಮಗೆ ನಿಜವಾದ ಸಂಗತಿಯನ್ನೇ ಹೇಳು ತ್ತೇನೆ, ಎಂದಳು.

ಮುರಾರಿ—ಒಳ್ಳೇದು, ಹೇಳಿರಿ ಹಾಗಾದರೆ. ಮೊನ್ನೆ ರಾತ್ರಿ ಒಂಬತ್ತು ಬಡಿದ ಬಳಿಕ ನಿಮ್ಮ ಯಜಮಾನರು ಮನೆಯಲ್ಲಿದ್ದರೇನು?

ಕಮಲಾ—ಇಲ್ಲ, ಉಂಡ ಕೂಡಲೆ ಹೊರಗೆ ಹೋಗಿದ್ದರು.

ಮುರಾರಿ—ಅವರು ಎಲ್ಲಿಗೆ ಹೋಗಿದ್ದರೆಂಬದನ್ನು ಹೇಳಬಲ್ಲಿರಾ?

ಕಮಲಾ—ನಮ್ಮ ಅಂಗಡಿಯ ಸಲುವಾಗಿ ಖೊಟ್ಟಿ ಹರಳುಕಲ್ಲುಗಳ ಆಭರಣಗಳನ್ನು ಮಾಡಿಕೊಡುವ ಒಬ್ಬ ಅಕ್ಕಸಾಲಿಗನಿರುವನು. ಅವನು ಕ್ರಾಫರ್ಡ ಮಾರ್ಕೇಟಿನ ಬಳಿಯಲ್ಲಿರುತ್ತಾನೆ. ಅತ್ಯವಶ್ಯವಾಗಿ ಬೇಕಾದ ಒಂದು ವಸ್ತುವನ್ನು ಮಾಡಿಸಿಕೊಂಡು ಬರುವದಕ್ಕಾಗಿ ಅವರು ಟ್ರಾಮಗಾಡಿ ಯಲ್ಲಿ ಕುಳಿತು ಅವನ ಮನೆಗೆ ಹೋಗಿದ್ದರು.

ಮುರಾರಿ—ಅವರು ಅಕ್ಕಸಾಲಿಗನ ಮನೆಗೆ ಹೋದದ್ದು ನಿಮಗೇನು ಗೊತ್ತು?

ಕಮಲಾ—ಅವರು ಮನೆಬಿಟ್ಟು ಹೋಗುವಾಗ ನನಗೆ ಹಾಗೆ ಹೇಳಿ ಹೋಗಿದ್ದರು.

ಮುರಾರಿ—ಬಹಳ ಒಳ್ಳೇದಾಯಿತು. ನಿಮ್ಮ ಯಜಮಾನರ ಬಿಡು ಗಡೆಗೆ ಆ ಅಕ್ಕಸಾಲಿಗನ ಸಾಕ್ಷಿಯು ಬಹಳ ಅನುಕೂಲವಾಗಬಹುದು?

ಕಮಲಾ—ಇಲ್ಲರೀ ಇಲ್ಲ, ಹಾಗೆ ಆಗುವಂತಿಲ್ಲ. ಯಾಕಂದರೆ ಅವರು, ತಿರುಗಿ ಬಂದಮೇಲೆ ಆ ಅಕ್ಕಸಾಲಿಗನು ನನಗೆ ಭೆಟ್ಟಿಯಾಗಲಿಲ್ಲೆಂದು ಹೇಳಿದರು.

ಮುರಾರಿ— ಇದು ಒಳಿತಾಗಲಿಲ್ಲ. ಒಳ್ಳೇದು, ಅಂದು ನಿಮ್ಮ ಯಜ

ಮಾನರು ತಿರುಗಿ ಮನೆಗೆ ಯಾವಾಗ ಬಂದರು?

ಕಮಲಾ—ಒಂದು ಬಡಿದು ಹೋಗಿತ್ತು.

ಮುರಾರಿ—ಇಷ್ಟು ತಡವಾದದ್ದರ ಕಾರಣವನ್ನು ನೀವು ಆಗ ಅವರಿಗೆ ಕೇಳಿರಬಹುದಲ್ಲವೇ?

ಕಮಲಾ—ಅಹುದು; ಕೇಳಿದೆನು, ಅದಕ್ಕೆ ಅವರು ನಾಟಕ ನೋಡಲಿಕ್ಕೆ ಹೋಗಿದ್ದೆನೆಂದು ಹೇಳಿದರು.

ಮುರಾರಿ—ತಿರುಗಿ ಬಂದಾಗ ಅವರ ಮುಖಮುದ್ರೆಯು ನಿತ್ಯದಂತೆ ಇತ್ತೇನು?

ಕಮಲಾ—ನಿತ್ಯದಂತೆಯೇ ಇತ್ತು.

ಈ ಸಂಭಾಷಣವು ನಡೆದಕಾಲಕ್ಕೆ ಗಣಪತರಾಯನು ಮುರಾರಿಪಂತನ ಹಿಂದೆ ನಿಂತು ಕಮಲಾಬಾಯಿಯ ಮುಖಮುದ್ರೆಯನ್ನು ಲಕ್ಷಪೂರ್ವಕವಾಗಿ ನೋಡುತ್ತಿದ್ದನು. ಅದರಿಂದ ಅವಳ ಮುಖಮುದ್ರೆಯಲ್ಲಿ ಆಗಿಂದಾಗ್ಗೆ ಆಗುತ್ತಿದ್ದ ಬದಲಾವಣೆಗಳು ಅವನ ಮನಸ್ಸಿನಲ್ಲಿ ಪೂರ್ಣವಾಗಿ ಬಿಂಬಿಸಿದವು. ಅವಳ ಮುಖಮುದ್ರೆಯಿಂದ ಅವಳಿಗೆ ಅತಿಶಯ ದುಃಖವಾದದ್ದು ವ್ಯಕ್ತವಾಗುತ್ತಿತ್ತು. ಮುರಾರಿಪಂತನ ಕೂಡ ಮಾತಾಡುವಾಗ ಆಕೆಯ ಕಣ್ಣುಗಳಿಂದ ಕಂಬನಿಗಳು ಒಂದೇಸವನೆ ಧಾರೆಗೊಂಡು ಸುರಿಯುತ್ತಿದ್ದವು. ಮುರಾರಿಪಂತನ ಪ್ರಶ್ನೆಗಳು ಅಖಂಡವಾಗಿ ನಡದೇ ಇದ್ದವು.

ಮುರಾರಿ—ನಿಮ್ಮ ಯಜಮಾನರು ಹೊರಗೆ ಹೋದಬಳಿಕ ನೀವು ಮನೆಯಲ್ಲಿ ಏನು ಮಾಡಿದಿರಿ?

ಕಮಲಾ—ನಾನು ನಮ್ಮ ಆಳುಮಗನಾದ ರಾಮುನನ್ನು ಸಂಗಡ ಕರಕೊಂಡು ಒಳಬಾಗಿಲಿನಿಂದ ಅಂಗಡಿಗೆ ಹೋಗಿ ಅವನಿಂದ ಅಂಗಡಿಯಲ್ಲಿಟ್ಟ ಪದಾರ್ಥಗಳಮೇಲೆ ಬಿದ್ದ ಧೂಳಿಯನ್ನು ಜಾಡಿಸಿಸಿದೆನು; ಮತ್ತು ನಮ್ಮ ಕಾರಕೂನನನ್ನು ಕರೆಯಿಸಿ, ಅವನಿಂದ ಯಾವತ್ತು ಪದಾರ್ಥಗಳನ್ನು ಕಪಾಟಿನಲ್ಲಿ ವ್ಯವಸ್ಥೆಯಿಂದ ಇಡಿಸಿದೆನು. ಇಷ್ಟಾಗುವವರೆಒಳಗೆ ಹನ್ನೆರಡೂವರೆ ಗಂಟೆ ರಾತ್ರಿಯಾಯಿತು. ಕಾರಕೂನನು ತನ್ನ ಮನೆಗೆ ಹೊರಟುಹೋದನು. ನಾನೂ ಮನೆಗೆಹೋಗಿ ಮಲಗಿಕೊಳ್ಳಬೇಕೆನ್ನುವಷ್ಟರಲ್ಲಿ ಅವರು ಬಂದರು.

ಮುರಾರಿ—ನಿಮ್ಮ ಕಾರಕೂನನನ್ನು ಕರೆಯಲಿಕ್ಕೆ ಯಾರನ್ನು ಕಳಿ

ಸಿದ್ದಿರಿ?

ಕಮಲಾ—ನಮ್ಮ ಆಳುಮಗ ರಾಮನು ಕರಕೊಂಡು ಬಂದನು.

ಮುರಾರಿ—ಹಾಗಾದರೆ ಅವನು ಬರುವವರೆಗೆ ಅಂಗಡಿಯಲ್ಲಿ ನೀವು ಒಬ್ಬರೇ ಇದ್ದಿರಿ?

ಕಮಲಾ—ಅಹುದು; ಆಗ ನಾನೊಬ್ಬಳೇ ಇದ್ದೆನು.

ಮುರಾರಿ—ಒಳ್ಳೇದು, ಇತ್ತಿತ್ತಲಾಗಿ ನಿಮ್ಮ ಅಂಗಡಿಯ ಸ್ಥಿತಿಯು ಚೆನ್ನಾಗಿಲ್ಲವೆಂದು ಜನರು ಅನ್ನುವರು. ಅದು ನಿಜವೋ?

ಕಮಲಾ—ಅಹುದು; ನಿಜವು. ಈಗ ಖೊಟ್ಟಿ ಹರಳುಕಲ್ಲುಗಳಿಂದ ಮಾಡಿದ ಒಡವೆಗಳನ್ನು ಜನರು ವಿಶೇಷವಾಗಿ ಕೊಳ್ಳುವದಿಲ್ಲ. ಇಷ್ಟಾಗಿ ನಮ್ಮ ಅಂಗಡಿಯಂತಹ ನಾಲ್ಕಾರು ಅಂಗಡಿಗಳು ಈ ಪಟ್ಟಣದಲ್ಲಿ ಆಗಿರುತ್ತವೆ.

ಮುರಾರಿ—ನಿಮ್ಮ ವ್ಯಾಪಾರವು ಕುಂದಿದ್ದರಿಂದ ನಿಮ್ಮ ಯಜಮಾನರಿಗೆ ಸಾಲವಾಗಿರಬಹುದು?

ಕಮಲಾ—ಅಹುದು, ಅದರಿಂದಲೇ ಅವರು ಇತ್ತಿತ್ತ ಯಾವಾಗಲೂ ಚಿಂತಾಗ್ರಸ್ತರಾಗಿರುತ್ತಾರೆ. ಅಂಗಡಿಯ ಕಡೆಗೆ ಅವರ ಲಕ್ಷವು ಕಡಿಮೆಯಾಗಿದೆ.

ಮುರಾರಿ—ಮೊನ್ನೆ ರಾತ್ರಿ ಕೊಲ್ಲಿಸಿಕೊಂಡಂಥ ನಿಮ್ಮ ಮಾವಂದಿರಾದ ವಿಠೋಜಿರಾವ ಮೋಹಿತೆ ಇವರ ಬಳಿಯಲ್ಲಿ ಬಹಳ ಹಣವು ಇತ್ತಲ್ಲವೇ?

ಕಮಲಾ—ಅಹುದು. ಆ ಹಣದಿಂದ ನಮಗೇನು ಪ್ರಯೋಜನವು? ಇತ್ತಿತ್ತಲಾಗಿ ಒಂದು ವರ್ಷದೊಳಗೆ ಅವರು ನಮಗೆ ಒಂದು ಒಡಕು ಕವಡಿಯನ್ನು ಸಹ ಕೊಟ್ಟಿಲ್ಲ.

ಮುರಾರಿ—ನಿಮ್ಮ ಯಜಮಾನರು ಎಂದಾದರೂ ದುಡ್ಡು ಬೇಡುತ್ತಿದ್ದರೇನು?

ಕಮಲಾ—ಹಲವು ಸಾರೆ ಬೇಡಿದ್ದರು. ಆದರೆ ಅವರು ಇವರ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳುತ್ತಿದ್ದಿಲ್ಲ.

ಮುರಾರಿ—ಹಾಗಾದರೆ ನಿಮ್ಮ ಯಜಮಾನರು ಕಕ್ಕನ ಬಳಿಯಲ್ಲಿದ್ದ ದುಡ್ಡು ತಮಗೆ ದೊರೆಯಬೇಕೆಂದು ಅವರ ಕೊಲೆಮಾಡಿದ್ದು ಸಂಭವನೀಯ.

ವಾಗಿ ತೋರುತ್ತದೆ.

ಕಮಲಾ—ನಾನು ಏನು ಹೇಳಲಿ! ನಿಮಗೆ ಅವರ ಸಹವಾಸವಿದ್ದರೆ ಗೊತ್ತಾಗುತ್ತಿತ್ತು. ಅವರಿಂದ ಇಂಥ ಕೆಲಸವು ಎಂದಿಗೂ ಆಗುವಂತೆ ಇಲ್ಲ.

ಮುರಾರಿ—ಹಾಗಾದರೆ ತಾವಾಗಿಯೇ ಅಪರಾಧವನ್ನು ಒಪ್ಪಿಕೊಳ್ಳುವ ಕಾರಣವೇನು? ಗುನ್ಹೆ ಮಾಡದೆ ಮಾಡಿದೆನೆಂದು ಹೇಳುವದು ಆಶ್ಚರ್ಯವಲ್ಲವೇ?

ಕಮಲಾ—ಪೋಲೀಸರ ಅಂಜಿಕೆಯಿಂದ ಅವರು ಹಾಗೆ ಹೇಳುತ್ತಿರ ಬಹುದು. ನಿನ್ನೆ ಇಲ್ಲಿ ಪೋಲೀಸ ಶಿಪಾಯಿಗಳು ಬಂದಾಗಲೇ ಅವರು ಗಾಬರಿಯಾಗಿ ಹುಚ್ಚು ಹಿಡಿದವರಂತೆ ಮಾಡಹತ್ತಿದರು.

ಮುರಾರಿ—ಇರುವು, ಇರಬಹುದು; ಪೋಲೀಸರ ಮುಂದೆ ಒಪ್ಪಿಕೊಂಡಂತೆ ಮ್ಯಾಜಿಸ್ಟ್ರೇಟ ಸಾಹೇಬರ ಮುಂದೆ ಒಪ್ಪಿಕೊಳ್ಳುವ ಕಾರಣವಿದ್ದಿಲ್ಲ. ಅವರು ಮ್ಯಾಜಿಸ್ಟ್ರೇಟ ಸಾಹೇಬರ ಮುಂದೆಯೂ ತಾವೇ ತಪ್ಪುಗಾರರೆಂದು ಒಪ್ಪಿಕೊಂಡಿರುತ್ತಾರೆ.

ಕಮಲಾ—ಸರಿ. ಅವರಿಗೆ ನಿಜವಾಗಿ ಭೀತಿಯಿಂದ ಹುಚ್ಚು ಹಿಡಿದದೆ. ಇದರಲ್ಲೇನೂ ಸಂಶಯವಿಲ್ಲ. ( ಹಣೆ ಹಣೆ ಬಡಕೊಂಡು ) ನನ್ನ ದುರ್ದೈವ, ಅದಕ್ಕೆ ಯಾರೇನು ಮಾಡುವರು?

ಮುರಾರಿ—ಹೀಗಾಗುವ ಸಂಭವವುಂಟು. ಅದಂತಿರಲಿ. ನನ್ನ ಮನಸ್ಸಿನಲ್ಲಿ ನಿಮ್ಮ ಮನೆಯನ್ನು ಸೂಕ್ಷ್ಮರೀತಿಯಿಂದ ಝಡತಿಮಾಡಬೇಕೆಂದಿರುತ್ತದೆ. ನಿಮ್ಮದೇನಾದರೂ ಅಡ್ಡಿಯುಂಟೇ?

ಕಮಲಾ—ಅಡ್ಡೀ? ನನ್ನದೇನೇನೂ ಅಡ್ಡಿಯಿಲ್ಲ. ಬೇಕಾದಹಾಗೆ ಝಡತಿಮಾಡಿಕೊಳ್ಳಿರಿ. ಇಕೋ, ಎದುರಿಗೆ ಕಾಣುವ ಕೋಣೆಯಲ್ಲಿ ಕಪಾಟು, ಮೇಜು, ಪೆಟ್ಟಿಗೆ ಇರುವವು. ತಗೊಳ್ಳಿರಿ. ಅವುಗಳ ಕೀಲಿಕೈಗಳನ್ನು. [ ಎಂದು ಹಲವು ಕೈಲೀಕೈಗಳುಳ್ಳ ಒಂದು ಕಬ್ಬಿಣದ ಉಂಗುರವನ್ನು ಮುರಾರಿಪಂತನ ಮುಂದೆ ಚಲ್ಲಿದಳು. ]

ಆಗ ಮುರಾರಿಪಂತನು ಆ ಕೀಲೀಕೈಗಳನ್ನು ತೆಗೆದುಕೊಂಡು ಕೋಣೆಯ ಬಾಗಿಲು ತೆರೆಯಲು, ನಾಯಿಯು ಒಂದೇಸವನೆ ಒದರುತ್ತಿತ್ತು. ಆದರೆ ಅದು ಕಟ್ಟಿ ಹಾಕಲ್ಪಟ್ಟದ್ದರಿಂದ ಅವಕ್ಕೆ ಅವರು ಹೆದರಲಿಲ್ಲ. ಬಳಿಕ ಮುರಾರಿಪಂತನು ಗಣಪತರಾಯನನ್ನು ಸಂಗಡ ಕರಕೊಂಡು ಕೋಣೆಯ ಒಳಹೊಕ್ಕು ಅವನ್ನು

ಸೂಕ್ಷ್ಮದೃಷ್ಟಿಯಿಂದ ನೋಡಿದನು. ಮತ್ತು ಕಪಾಟನ್ನು ತೆರೆದನು. ಅದರಲ್ಲಿ ವಿಶ್ವಾಸರಾಯನವೂ ಅವನ ಹೆಂಡತಿಯವೂ ಕೆಲವು ಅರಿವೆಗಳು ಇದ್ದವು. ಅವುಗಳಲ್ಲಿ ಕೆಲಕೆಲವು ಬೆಲೆಯುಳ್ಳವು ಇದ್ದವು. ಬಳಿಕ ಪೆಟ್ಟಿಗೆಯನ್ನು ತೆರೆದರು. ಅದರಲ್ಲಿ ಖೊಟ್ಟಿರತ್ನದ ಕೆಲವು ಆಭರಣಗಳೂ, ಕಮಲಾಬಾಯಿಯ ಮೈಮೇಲಿನ ಆಭರಣಗಳೂ ಕೆಲವು ಬೆಳ್ಳಿಯ ಪಾತ್ರೆಗಳೂ, ಇದ್ದವು. ಇಷ್ಟಾದ ಬಳಿಕ ಮೇಜಿನ ಎರಡೂ “ ಡ್ರಾ ಅರ ” ಗಳನ್ನು ತೆರೆದು ನೋಡಲು, ಅದರಲ್ಲಿ ಬರೀ ಕಾಗದಪತ್ರಗಳು ಇದ್ದವು. ಅವುಗಳಲ್ಲಿ ವಿಶೇಷವಾಗಿ ವಿಶ್ವಾಸರಾಯನಿಗೆ ಅವನ ಆಪ್ತರಿಂದ ಬಂದ ಪತ್ರಗಳು, ಗಿರಾಕಿಗಳ ಮೇಲೆ ಮಾಡಿದ ಬಿಲ್ಲುಗಳು, ಬೇರೆ ಅಂಗಡಿಕಾರರು ವಿಶ್ವಾಸರಾಯನ ಮೇಲೆ ಮಾಡಿದ ಬಿಲ್ಲುಗಳು ಇವೇ ಇದ್ದವು. ವಿಶ್ವಾಸರಾಯನ ಹೆಸರಿನಿಂದ ಬಂದ ಹಲವು ಪತ್ರಗಳನ್ನು ಮುರಾರಿಪಂತನು ಸೂಕ್ಷ್ಮರೀತಿಯಿಂದ ಓದಿ ನೋಡಿದನು. ಆದರೆ ಅವುಗಳಲ್ಲಿ ಒಂದರಲ್ಲಿಯಾದರೂ ಸಂಶಯಬರುವಂತಹ ಸಂಗತಿಯು ಇದ್ದಿಲ್ಲ. ಆ ಕೋಣೆಯಲ್ಲಿ ಇನ್ನೊಂದು ಟ್ರಂಕ ಎಂಬ ಪೆಟ್ಟಿಗೆಯನ್ನು ನೋಡುವದು ಇತ್ತು. ಅದನ್ನು ತೆರೆದರು. ಅದರಲ್ಲಿ ಹತ್ತು ಹದಿನೈದು ರೂಪಾಯಿಗಳು ಕೆಲವು ರೊಕ್ಕ, ಚಿಲ್ಲರುಗಳು ಸಿಕ್ಕವು. ಈ ಝಡತಿಯು ನಡೆದ ಕಾಲಕ್ಕೆ ಕಮಲಾಬಾಯಿಯು ಹತ್ತರದಲ್ಲಿಯೇ ನಿಂತುಕೊಂಡಿದ್ದಳು. ಹೊರಗೆ ನಾಯಿಯು ಒಂದೇಸಮನೆ ಒದರುತ್ತಿತ್ತು. ಎಲ್ಲ ಕಡೆಗೆ ನೋಡುವದು ಆದಬಳಿಕ ಆ ಸಾಮಾನುಗಳನ್ನು ಯಥಾಸ್ಥಿತವಾಗಿ ಇಟ್ಟು ಕೀಲಿಹಾಕಿ ಅವರು ಕೋಣೆಯಿಂದಹೊರಬಿದ್ದು ಕೋಣೆಗೆಕೀಲೀಹಾಕಿ ಕೀಲಿಕೈಗಳನ್ನು ಕಮಲಾಬಾಯಿಯ ಕೈಯಲ್ಲಿ ಕೊಡುವವರೆಗೆ ನಾಯಿಯ ಒದರಾಟವು ನಿಲ್ಲಲಿಲ್ಲ. ನಾಯಿಯ ಈ ಸ್ವಾಮಿಭಕ್ತಿಯನ್ನು ಕಂಡು ಗಣಪತರಾಯನಿಗೆ ಬಹಳ ಆಶ್ಚರ್ಯವಾಯಿತು. ಅವನು ಕಮಲಾಬಾಯಿಯನ್ನು ಕುರಿತು, ಈ ನಾಯಿಯು ಮಾತ್ರ ಒಳ್ಳೇ ನಂಬುಗೆಯದಿರುತ್ತದೆ, ಅಂದನು.

ಅದಕ್ಕೆ ಕಮಲಾಬಾಯಿಯು—ಅದು ನಮ್ಮ ಮನೆಯಲ್ಲಿದ್ದ ಮೂಲಕವಾಗಿಯೇ ರಾತ್ರಿಯಲ್ಲಿ ನಮಗೆ ಚೆನ್ನಾಗಿ ನಿದ್ದೆ ಹತ್ತುತ್ತದೆ. ಈಗೆರಡು ವರ್ಷಗಳ ಕೆಳಗೆ ಒಬ್ಬ ದೊರೆಸಾನಿಯು ನಮ್ಮ ಅಂಗಡಿಗೆ ಬಂದಿದ್ದಳು. ಈ ನಾಯಿಯು ಮೊದಲು ಅವಳ ಹತ್ತರ ಇತ್ತು. ನಮ್ಮ ಅಂಗಡಿಯಲ್ಲಿ ಒಂದು

ಜೀನಸು ತೆಗೆದುಕೊಂಡು, ಅದಕ್ಕೆ ಬದಲಾಗಿ ನಮಗೆ ಈ ನಾಯಿಯನ್ನು ಕೊಟ್ಟು ಹೋಗಿರುತ್ತಾಳೆ. ಅಂದಿನಿಂದ ಇದು ನಮ್ಮ ಮನೆಯಲ್ಲಿಯೇ ಇರುತ್ತದೆ, ಎಂದು ಹೇಳಿದಳು.

ಕಮಲಾಬಾಯಿಯ ಮನೆಯಿಂದ ಹೊರಗೆ ಹೊರಡುವ ಕಾಲಕ್ಕೆ ಗಣಪತರಾಯನು ಆ ನಾಯಿಯ ಬಳಿಗೆ ಹೋಗಿ ಮಾತಾಡಿಸಹೋದನು. ಆದರೆ ಆ ನಾಯಿಯು ಇವನನ್ನು ನಂಬಲಿಲ್ಲ. ಒಮ್ಮಿಂದೊಮ್ಮೆ ಇವನ ಮೈಮೇಲೆ ಏರಿಹೋಗಿ, ಕಚ್ಚುತ್ತದೆಯೋ ಎಂಬಂತೆ ತೋರಿತು. ಆಗ ಕಮಲಾಬಾಯಿಯು ಅಂದದ್ದೇನಂದರೆ—ಆ ನಾಯಿಗೆ ನಮ್ಮಿಬ್ಬರ ಹೊರತು ಯಾರ ಗುರುತೂ ಇಲ್ಲ. ಯಾರಾದರೂ ಕರೆದರೆ, ಅದು ಅವರ ಬಳಿಗೆ ಹೋಗುವದಿಲ್ಲ.

ಕಮಲಾಬಾಯಿಯ ಈ ಮಾತುಗಳನ್ನು ಕೇಳಿ ಗಣಪತರಾಯನ ಮನಸ್ಸಿನಲ್ಲಿ ಏನೋ ಒಂದು ವಿಚಾರವು ಹುಟ್ಟಿ, ಅವನು ಒಮ್ಮೆಲೆ ಅವಳಿಗೆ ಒಂದು ಪ್ರಶ್ನವನ್ನು ಮಾಡಿದನು—ಮೊನ್ನೆ, ಈ ನಾಯಿಯು ಮನೆಯಲ್ಲಿಯೇ ಇತ್ತೇನು?

ಈ ಪ್ರಶ್ನೆಗೆ ಕಮಲಾಬಾಯಿಯು ಒಮ್ಮೆಲೆ ಉತ್ತರವನ್ನು ಕೊಡಲಿಲ್ಲ. ಕೆಲಹೊತ್ತು ವಿಚಾರಮಾಡಿದಂತೆ ತೋರಿಸಿ— "ಅದೇನು ನನ್ನ ಲಕ್ಷದಲ್ಲಿಲ್ಲ" ಎಂದು ಹೇಳಿದಳು.

ಅದಕ್ಕೆ ಗಣಪತರಾಯನು—ಅದು ನಿಮ್ಮ ಯಜಮಾನರ ಸಂಗಡ ಹೊರಗೆ ಹೋಗಿರಬಹುದಲ್ಲವೆ?

ಕಮಲಾಬಾಯಿಯು—ಅಹುದು, ಅಹುದು. ಅದು ಅವರ ಸಂಗಡಲೇ ಹೊರಗೆ ಹೋಗಿತ್ತು, ನನಗೆ ಈಗ ನೆನಪಾಯಿತು, ಎಂದಳು.

ಗಣಪತರಾವ—ಒಳ್ಳೇದು, ಇದೇ ಈಗ ನೀವು ನಿಮ್ಮ ಯಜಮಾನರು ಆ ದಿನ ಟ್ರಾಮಿನಲ್ಲಿ ಕುಳಿತು ಹೋದರೆಂದು ಹೇಳಿದಿರಲ್ಲ; ಆದರೆ ಈ ನಾಯಿಯು ಟ್ರಾಮಿನ ಸಂಗಡ ಓಡಲಿಕ್ಕೆ ಕಲಿತಿರುವದೇನು?

ಈ ಮಾತಿಗೆ ಕಮಲಾಬಾಯಿಯು ಏನೂ ಉತ್ತರವನ್ನು ಕೊಡಲಿಲ್ಲ. ಅದಕ್ಕಾಗಿ ಅವನು ಇನ್ನೊಂದು ಪ್ರಶ್ನವನ್ನು ಮಾಡತಕ್ಕವನಿದ್ದನು. ಆದರೆ ಮುರಾರಿಪಂತನು ನಡುವೇ ಬಾಯಿ ಹಾಕಿ, ಅವನ ಮಾತಿಗೆ ಅಡ್ಡಿ ಮಾಡಿದನು.

ಗಣಪತರಾಯನ ಕಡೆಯ ಪ್ರಶ್ನದಿಂದ ಅವಳು ಗಾಬರಿಯಾಗಿದ್ದಳು. ಆದನ್ನು ಉಪಯೋಗಮಾಡಿಕೊಳ್ಳುವದು ಒತ್ತಟ್ಟಿಗೇ ಉಳಿದು, ಮುರಾರಿ ಪಂತನು—ಕಮಲಾಬಾಯಿಯೇ, ನಿಮಗೆ ನಾವು ವ್ಯರ್ಥವಾಗಿ ಕಷ್ಟವನ್ನು ಕೊಟ್ಟೆವು. ಹಾಗೆ ಮಾಡುವದು ಅವಶ್ಯವಾಗಿತ್ತು; ಅದಕ್ಕೆ ಉಪಾಯವಿಲ್ಲ. " ವಿಶ್ವಾಸರಾಯನು ಅಪರಾಧಿ ಎಂಬದಕ್ಕೆ ಇಲ್ಲಿ ನಮಗೆ ಯಾವಪ್ರಕಾರದ ಪುರಾವೆಗಳೂ ದೊರೆಯಲಿಲ್ಲ. ನೀವು ಹೇಳುವಂತೆ ವಿಶ್ವಾಸರಾಯನು ನಿರಪರಾಧಿಯೆಂದು ನಮ್ಮ ಮನಸ್ಸಿಗಾದರೂ ಪೂರ್ಣ ನಂಬಿಗೆ ಉಂಟಾಗಿರುತ್ತದೆ. ಇನ್ನು ಈಗ ಮೂರು ಬಡಿಯುತ್ತದೆ. ನೀವು ಮ್ಯಾಜಿಸ್ಟ್ರೇಟರ ಕೋರ್ಟಿಗೆ ಹೋಗಿರಿ. ಅಲ್ಲಿ ನಿಮ್ಮ ಸಾಕ್ಷಿಯಾಗುವದು. ವಿಶ್ವಾಸರಾಯನ ಬಿಡುಗಡೆಯ ವಿಷಯದಲ್ಲಿ ಅದು ಮಹತ್ವದ ಸಾಕ್ಷಿಯೆಂದು ಎಣಿಸಲ್ಪಡುತ್ತದೆ. ನೀವು ಹೆದರಬೇಡಿರಿ. ಮ್ಯಾಜಿಸ್ಟ್ರೇಟರು ಪಾರಸೀಕುಲದವರು ಅವರು ಬಹಳ ದಯಾವಂತರಿರುವರು. ಅವರು ಕೇಳಿದ ಪ್ರಶ್ನಗಳಿಗೆ ನಿಮಗೆ ಗೊತ್ತಿದ್ದಮೇರೆಗೆ ಸರಳ ಉತ್ತರವನ್ನು ಕೊಡಿರಿ. ಸ್ವಲ್ಪಾದರೂ ಸುಳ್ಳು ಬೆರಿಸಬೇಡಿರಿ; ನಾವು ಹೋಗಿಬರುತ್ತೇವೆ, " ಎಂದು ಹೇಳಿ, ಉಭಯತರೂ ಹೊರಬಿದ್ದರು.

ಹೊರಬಿದ್ದು ದಾರೀ ಹಿಡಿದು ನಡೆಯುವಾಗ ಗಣಪತರಾಯನ ಮನಸ್ಸಿನಲ್ಲಿ, ತಾನು ಕಮಲಾಬಾಯಿಗೆ ಕೇಳಿದ ನಾಯಿಯ ಪ್ರಶ್ನದ ವಿಷಯಕ್ಕೆ ವಿಚಾರವು ನಡೆದಿತ್ತು. ಆ ನಾಯಿಯು ಯಜಮಾನರ ಸಂಗಡ ಹೋಗಿತ್ತು, ಎಂಬ ಮಾತು ತೀರ ಸುಳ್ಳು, ಎಂದು ಅವನ ಗೃಹಿಕೆಯಾಗಿತ್ತು. ಅದರಿಂದ ಈ ಪ್ರಶ್ನದಿಂದ ಆಕೆಯನ್ನು ಮಾತಿನಲ್ಲಿ ಹಿಡಿದು ಯಾವದೊಂದು ಮಹತ್ವದ ಸಂಗತಿಯನ್ನು ಬೈಲಿಗೆ ತರಬೇಕೆಂದು, ಅವನ ಆಲೋಚನೆ ಇತ್ತು. ಆದರೆ ಮುರಾರಿಪಂತನು ನಡುವೇ ಮಾತಾಡಿ ಎಲ್ಲವನ್ನು ಕೆಡಿಸಿ ಬಿಟ್ಟನು. ಆದ್ದರಿಂದ ಅವನು ಮನಸ್ಸಿನೊಳಗೆ ಮುರಾರಿಪಂತನ ವಿಷಯವಾಗಿ ಕೋಪವುಳ್ಳವನಾಗಿದ್ದನು. ಮತ್ತು ಈ ವಿಷಯವಾಗಿ ಅವನಿಗೆ ಆಡಿತೋರಿಸಬೇಕೆಂತಲೂ ಅವನ ಮನಸ್ಸಿನಲ್ಲಿ ಬಂತು. ಕಮಲಾಬಾಯಿಯ ಮನೆಯನ್ನು ಬಿಟ್ಟು ಒಂದು ಒಂದೂವರೆ ಫರ್ಲಾಂಗು ದೂರ ಹೋದ ಬಳಿಕ ಮುರಾರಿಪಂತನು ಗಣಪತರಾಯನ ಕಡೆಗೆ ತಿರುಗಿ—ಗಣಪತರಾಯರೇ, ನೀವು ಬಹಳ ದೊಡ್ಡ ತಪ್ಪು ಮಾಡಿದಿರಿ, ಅಂದನು.

ಅದಕ್ಕೆ ಗಣಪತರಾಯನು ಒಳ್ಳೇ ಗಾಬರಿಯಾಗಿ—ಅದೇನು ತಪ್ಪು! ಎಂದು ಕೇಳಿದನು.

ಆಗ ಮುರಾರಿಪಂತನು ಅವನ ಅಂಜಿಕೆಯ ಸ್ವರೂಪವನ್ನೂ, ಮುಖ ಲಕ್ಷಣವನ್ನೂ ಕಂಡು ನಸುನಕ್ಕು,—ಅಷ್ಟೇನು ಗಾಬರಿಯಾಗಲಿಕ್ಕೆ ಕಾರಣ ವಿಲ್ಲ. ನಾಯಿಯ ವಿಷಯವಾಗಿ ಪ್ರಶ್ನ ಕೇಳುವದರಲ್ಲಿ ಬಹಳ ಗಡಿಬಿಡಿ ಮಾಡಿದಿರಿ. ಆ ಪ್ರಶ್ನಮಾಡುವ ನಿಮ್ಮ ಉದ್ದೇಶವು ನನ್ನ ಲಕ್ಷ್ಯಕ್ಕೆ ಬಂತು; ಆದರೆ ನಿಮಗೆ ಆ ಪ್ರಕಾರದ ಸಂಶಯವು ಬಂದಂತೆ ಕಮಲಾಬಾಯಿಗೆ ತೋರಿ ದರೆ, ಆ ನಾಯಿಯ ಹೆಸರು ಸಹ ಉಳಿಯುತ್ತಿದ್ದಿಲ್ಲ. ನಾಯಿಯು ಇಲ್ಲದಂತಾ ದಮೇಲೆ ನಿಜವಾದ ಅಪರಾಧಿಯನ್ನು ಗೊತ್ತು ಹಚ್ಚುವ ಬಗೆಯಾವದು? ಎಂದು ಕೇಳಲು ಗಣಪತರಾಯನು ಆತನ ಚಾತುರ್ಯಕ್ಕೆ ಮನಸ್ಸಿನಲ್ಲಿಯೇ ಅಚ್ಚರಿಪಡುತ್ತಿದ್ದನು.

——(೦)——

೯ನೆಯ ಪ್ರಕರಣ.

## ಕೊಲೆಗಡಕನ ಶೋಧ.

“ನಾಯಿಯ ಸಂಬಂಧದಿಂದ ಕಮಲಾಬಾಯಿಗೆ ಪ್ರಶ್ನವನ್ನು ಕೇಳಿದ್ದು ನನ್ನಿಂದ ದೊಡ್ಡ ತಪ್ಪಾಯಿತು; ಈ ಪ್ರಶ್ನವನ್ನು ಕೇಳಿದ್ದರಿಂದ ಮುರಾರಿಪಂತರಿಗೆ ನಾನು ಯಾವ ದೋಷವನ್ನು ಕೊಡಬೇಕೆನ್ನುತ್ತಿದ್ದೆನೋ ಅದೇ ದೋಷಕ್ಕೆ ನಾನು ಪಾತ್ರನಾದೆನು. ಎಂದು ಗಣಪತರಾಯನ ಮನ ಸ್ಸಿಗೆ ಈಗ ಹೊಳೆಯಹತ್ತಿತು. ಮತ್ತು ಆ ಬಗ್ಗೆ ಮುರಾರಿಪಂತನ ಬಳಿಗೆ ದುಃಖ ಪ್ರದರ್ಶನವನ್ನೂ ಮಾಡಿದನು. ಮುರಾರಿಪಂತನು ಬಹಳ ದೊಡ್ಡ ಮನಸ್ಸಿನವನು. ಅವನು ಗಣಪತರಾಯನಿಗೆ ಅಂದದ್ದೇನಂದರೆ—ಇಂಥ ಸಾವಿರಾರು ತಪ್ಪುಗಳು ನನ್ನಿಂದ ಸಂಭವಿಸಿರುತ್ತವೆ, ಅದರಲ್ಲೇನು ಮಹ ತ್ವವಿಲ್ಲ. ನೀವು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವ ಕಾರಣವಿಲ್ಲ. ಇದ ರಿಂದ ನಮ್ಮ ಕೆಲಸಕ್ಕೆ ವಿಘ್ನವು ಬಾರದಂತೆ ನಾನು ಅದರ ವ್ಯವಸ್ಥೆಯನ್ನು

ಮಾಡುತ್ತೇನೆ, ಎಂದು ಹೇಳಿ ಕಿಸೆಯೊಳಗಿಂದ ಒಂದು ಸೀಟಿಯನ್ನು ತೆಗೆದು ಊದಲು, ಆ ಸಪ್ಪಳವನ್ನು ಕೇಳಿ ಒಂದೆರಡು ಮಿನೀಟಿನೊಳಗೆ ಒಬ್ಬ ಮನುಷ್ಯನು ಅವನ ಬಳಿಗೆ ಬಂದನು; ಮುರಾರಿಪಂತನು ಅವನ ಕಿವಿಯೊಳಗೆ ಏನೇನೋ ಹೇಳಿದನು. ಅದಕ್ಕೆ ಆ ಮನುಷ್ಯನು ಗೋಣು ಅಲ್ಲಾಡಿಸುವದರಿಂದಲೇ ತನ್ನ ಸಮ್ಮತಿಯನ್ನು ತೋರಿಸಿ, ಹೊರಟುಹೋದನು. ಆಗ ಗಣಪತರಾಯನು ಮುರಾರಿಪಂತನಿಗೆ—ಬಂದ ಮನುಷ್ಯನು ಯಾರು? ಅವನಿಗೆ ನೀವು ಏನು ಹೇಳಿದಿರಿ? ಎಂದು ಕೇಳಿದನು. ಅದಕ್ಕೆ ಮುರಾರಿಪಂತನು ನಾನು ಇಲ್ಲಿಯ ಗುಪ್ತ ಪೋಲೀಸರ ಒಬ್ಬ ಅಮಲದಾರನಿರುತ್ತೇನೆ. ನಾನು ಹೋದಕಡೆಗೆ ನನ್ನ ಸಂಗಡ ಇಬ್ಬರು ಸಿಪಾಯರು ಯಾವಾಗಲೂ ಗುಪ್ತವಾಗಿ ಇದ್ದೇ ಇರುವರು. ಯಾಕಂದರೆ, ಒಮ್ಮೊಮ್ಮೆ ನನ್ನ ಕೆಲಸದಲ್ಲಿ ಅವರ ಸಾಹಾಯ್ಯವು ನನಗೆ ಬೇಕಾಗುತ್ತದೆ. ಇದೇ ಈಗ ಬಂದವನು ಅವರೊಳಗಿನವನೊಬ್ಬನು; ಅವನಿಗೆ ನಾನು ಕಮಲಾಬಾಯಿಯ ಮನೆಯಮೇಲೆ ಲಕ್ಷವಿಡೆಂದು ಹೇಳಿದ್ದೇನೆ, ಎಂದನು.

ಮುರಾರಿಪಂತನ ಬುದ್ಧಿ ಕೌಶಲ್ಯವನ್ನೂ, ಎಚ್ಚರಿಕೆಯನ್ನೂ ಕಂಡು ಗಣಪತರಾಯನಿಗೆ ಬಹಳ ಕೌತುಕವಾಯಿತು. ಕಮಲಾಬಾಯಿಯ ಮನೆಯಿಂದ ಹೊರಟಮೇಲೆ ಅವರಿಬ್ಬರು ಠಾಕುರದ್ವಾರದೊಳಗಿಂದ ಚರ್ನೀರೋಡ ಸ್ಟೇಶನದ ಗೇಟಿನೊಳಗೆ ಹಾಯ್ದು ಸಮುದ್ರದ ದಂಡೆಗೆ ಬಂದು, ಅಲ್ಲಿಯೇ ಸಮೀಪದಲ್ಲಿ "ಚೌಪಾಟೀಗಾರ್ಡನ್" ದಲ್ಲಿ ಶಾಂತವಾದ ಒಂದು ಸ್ಥಳದಲ್ಲಿ ಬಾಕಿನಮೇಲೆ ಕುಳಿತುಕೊಂಡರು. ಮತ್ತು ನಿನ್ನೆ ಸಾಯಂಕಾಲದಿಂದ ಈಗಿನವರೆಗೆ ನಡೆದ ಎಲ್ಲ ಸಂಗತಿಗಳ ವಿಷಯವಾಗಿ ತಮ್ಮ ತಮ್ಮೊಳಗೆ ಚರ್ಚೆ ಮಾಡಹತ್ತಿದರು. ಕೊಲೆ ಮಾಡಿದವನು ವಿಶ್ವಾಸರಾಯನಲ್ಲೆಂಬದು ಅವರಿಗೆ ಪೂರ್ಣವಾಗಿ ಮನವರಿಕೆಯಾಗಿತ್ತು; ಯಾಕಂದರೆ, ಯಾವ ಶಸ್ತ್ರದಿಂದ ಕೊಲೆಯಾಗಿದೆ, ಎಂಬದು ಸಹ ವಿಶ್ವಾಸರಾಯನಿಗೆ ಗೊತ್ತಿಲ್ಲ. ಇನ್ನು ಒಂದುವೇಳೆ ಅವನು ಪೋಲೀಸರನ್ನು ಮೋಸಗೊಳಿಸಬೇಕೆಂದು ಹೀಗೆ ಇಲ್ಲದ್ದೊಂದು ಹುಚ್ಚು ಮೈಮೇಲೆ ಹಾಕಿಕೊಳ್ಳುತ್ತಿರಬಹುದು. ಕೊಲೆಮಾಡಿದವನು ಅವನೇ ಇರಬೇಕು, ಹೀಗೆ ಅನ್ನಬೇಕೆಂದರೆ ಮೊನ್ನಿನ ದಿವಸ ರಾತ್ರಿ ಅವನು ತಿರುಗಾಡಲಿಕ್ಕೆ ಮನೆಯಿಂದ ಹೊರಟಾಗ ನಾಯಿಯು ಅವನ ಸಂಗಡಲೇ ಇತ್ತೆಂದು

ತಿಳಿಯಬೇಕಾಗುತ್ತದೆ; ಯಾಕಂದರೆ, ಅಂದು ರಾತ್ರಿ ವಿಠೋಜಿರಾಯರ ಕೊಲೆಮಾಡಲಿಕ್ಕೆ ಬಂದ ಮನುಷ್ಯನ ಸಂಗಡ ನಾಯಿ ಇತ್ತೆಂದು ವಿಠೋಜಿರಾಯನ ಅಡಿಗೆಯವನೂ, ವಠಾರದ ಕಾವಲುಗಾರನೂ ಹೇಳುತ್ತಾರೆ; ಆದರೆ ನಾಯಿಯ ಸಂಬಂಧದಿಂದ ಕಮಲಾಬಾಯಿಗೆ ಒಂದು ಪ್ರಶ್ನವನ್ನು ಕೇಳಿದರೆ, ಅವಳು ಸೇಚಾಟದಲ್ಲಿ ಬಿದ್ದಂತೆ ತೋರಿತು. ಇದರಿಂದ ಆ ದಿನ ರಾತ್ರಿ ನಾಯಿಯು ಅವನ ಸಂಗಡ ಹೋಗಿಲ್ಲವೆಂಬದು ನಿಶ್ಚಯವಾಗಿ ತಿಳಿಯುತ್ತದೆ.

ಈ ಪ್ರಕಾರ ಅನೇಕ ವಿಚಾರಗಳಿಂದ ವಿಶ್ವಾಸರಾಯನು ಕೊಲೆಮಾಡಿಲ್ಲೆಂದು ಅವರ ಮನವರಿಕೆಯಾಯಿತು. ಹೀಗಿದ್ದು, ವಿಶ್ವಾಸರಾಯನು ತಾನಾಗಿಯೇ ಅಪರಾಧವನ್ನು ಯಾಕೆ ಒಪ್ಪಿಕೊಳ್ಳುತ್ತಿರಬಹುದೆಂಬ ಗೂಢವು ಅವರಿಗೆ ತಿಳಿಯಲೊಲ್ಲದು. ಆದರೆ ಈ ತೊಡಕು ಬಿಚ್ಚುತ್ತ ಕೂಡಲಿಕ್ಕೆ ಇದು ತಕ್ಕ ಸಮಯವಾಗಿದ್ದಿಲ್ಲ.

ವಿಶ್ವಾಸರಾಯನು ಕೊಲೆ ಮಾಡಿಲ್ಲೆಂಬದು ಕಮಲಾಬಾಯಿಗಾದರೂ ಖಾತ್ರಿಯಾದಂತೆ, ಅವಳ ಮಾತಿನಿಂದ ಅವರಿಗೆ ಗೊತ್ತಾಯಿತು. ಆದರೆ ಅವಳಿಗೆ ಈ ಕೊಲೆಯ ಸಂಬಂಧದಿಂದ ಏನಾದರೂ ಕೊಲೆಮಾಡಿದವನ ಹೆಸರಾದರೂ ಗೊತ್ತಿರಬಹುದೆಂಬ ಸಂಶಯವು ಅವರ ಮನಸ್ಸಿನಲ್ಲಿ ಹೊಕ್ಕಿತು. ಅಪರಾಧವು ತನ್ನ ಗಂಡನಮೇಲೆ ಬಂದಿರಲು, ನಿಜವಾದ ತಪ್ಪುಗಾರನು ತನಗೆ ಗೊತ್ತಿದ್ದರೂ, ಅವನ ಹೆಸರನ್ನು ಹೇಳಿ ತನ್ನ ಗಂಡನನ್ನು ಬಿಡಿಸಿಕೊಳ್ಳುವದು ಅವಳ ಮನಸ್ಸಿನಲ್ಲಿ ಬರಲಿಲ್ಲ. ಇದರಿಂದ ಕೊಲೆಮಾಡಿದ ಮನುಷ್ಯನಲ್ಲಿ ಕಮಲಾಬಾಯಿಗೆ ತನ್ನ ಗಂಡನಕಿಂತಲೂ ಹೆಚ್ಚು ಪ್ರೇಮವುಂಟೆಂದು ಗೊತ್ತಾಗುತ್ತದೆ. ಕಮಲಾಬಾಯಿಯ ಇಷ್ಟು ಪ್ರೇಮಕ್ಕೆ ಪಾತ್ರನಾದ ಮನುಷ್ಯನು ಯಾರು? ಅವನನ್ನು ಹೇಗೆ ಶೋಧಿಸಬೇಕು? ಈ ಕೆಲಸದಲ್ಲಿ ಆ ನಾಯಿಯು ಉಪಯೋಗ ಬೀಳುವಂತೆ ತೋರುತ್ತದೆ. ಯಾಕಂದರೆ, ಕೊಲೆ ಮಾಡಿದ ಮನುಷ್ಯನಿಗೆ ಅದು ಚೆನ್ನಾಗಿ ಈಲಾಗದ ಹೊರತು ಅದು ಅವನ ಬೆನ್ನು ಹತ್ತಿ ತಿರುಗಲಾರದು. ಈ ಮಾತು ಅವರು ಕಮಲಾಬಾಯಿಯ ಮನೆಗೆ ಹೋದಾಗ ಅವರ ಅನುಭವಕ್ಕೆ ಬಂದಿತ್ತು. ಕಮಲಾಬಾಯಿಯೂ, ಕೊಲೆಪಟ್ಟ ಗೃಹಸ್ಥನ ಅಡಿಗೆಯವನೂ, ನಾಯಿಯು ವಿಶ್ವಾಸರಾವ, ಕಮಲಾಬಾಯಿ-

ಇವರ ಹೊರತು ಯಾರಿಗೂ ಈಲಾಗಿಲ್ಲವೆಂದು ಹೇಳಿದರು; ಆದರೆ ಅದು ಇನ್ನೊಬ್ಬ ಗೃಹಸ್ಥನಿಗೆ ಈಲಾಗಿರಲಿಕ್ಕೆ ಬೇಕು. ಮತ್ತು ಅವನೇ ಕೊಲೆ ಮಾಡಿರಲಿಕ್ಕೆ ಬೇಕು, ಎಂದು ಅವರು ತರ್ಕಿಸಿದರು. ಇನ್ನು ಆ ನಾಯಿಯು ಅವನಿಗೆ ಈಲಾಗಬೇಕಾದರೆ, ಆ ಗೃಹಸ್ಥನು ಮೇಲಿಂದಮೇಲೆ ವಿಶ್ವಾಸರಾಯನ ಮನೆಗೆ ಬರುತ್ತಿರಲಿಕ್ಕೆ ಬೇಕು. ಅಂದರೆ ಅವನು ವಿಶ್ವಾಸರಾಯನ ಸ್ನೇಹಿತನಿದ್ದು, ಆ ಸ್ನೇಹವು ತೋರಿಕೆಗೆ ಮಾತ್ರ ಇರುವದು, ಎಂದು ಅವರಿಗೆ ಭಾಸವಾಯಿತು. ಯಾಕಂದರೆ, ತಾನು ಕೊಲೆಮಾಡಿ, ವಿಶ್ವಾಸರಾಯನ ಮೇಲೆ ಅಪರಾಧ ಹೊರುವಂತೆ ಮಾಡಿದವನು, ವಿಶ್ವಾಸರಾಯನ ನಿಜವಾದ ಸ್ನೇಹಿತನು ಹೇಗೆ ಆಗುವನು? ಅದೇ ಪ್ರಕಾರ ವಿಶ್ವಾಸರಾಯನ ತೋರಿಕೆಯ ಸ್ನೇಹಿತನು ಕಮಲಾಬಾಯಿಯ ಪೂರ್ಣ ಪ್ರೇಮಕ್ಕೆ ಪಾತ್ರನಾಗಿರುವನೆಂತಲೂ ಅವರು ಸಿದ್ಧಮಾಡಿದರು. ಈ ಮೇರೆಗೆ ಆಲೋಚನೆಮಾಡಿ, ಕಡೆಗೆ ಅವರು ನಿರ್ಣಯವನ್ನು ಮಾಡಿದ್ದೇನಂದರೆ—ಈ ಕೊಲೆಯನ್ನು ಕಮಲಾಬಾಯಿಯ ಪ್ರೀತಿಗೆ ಪಾತ್ರನಾದವನೇ ಮಾಡಿರುವನು; ಇದಕ್ಕೆ ಅವಳ ಸಮ್ಮತಿಯೂ ಇರುವದು; ಯಾಕಂದರೆ, ಕೊಲೆಪಟ್ಟ ಮುದುಕನು ತಮ್ಮ ಕೂಡ ವಿರೋಧ ಬಳಿಸುತ್ತಾನೆಂಬದು ಅವಳಿಗೆ ಪೂರ್ಣವಾಗಿ ಗೊತ್ತಿತ್ತು. ಆದುದರಿಂದಲೇ ಅವಳು ಆ ಸೇಡು ತೀರಿಸಿಕೊಳ್ಳಲಿಕ್ಕೆ ಈ ಕೆಲಸವನ್ನು ಮಾಡಿರಬಹುದು. ಆದರೆ ಈ ಅಪರಾಧವು ಅವಳ ಗಂಡನ ಮೇಲೆ ಬರುವಂತೆ ಮಾಡಬೇಕೆಂಬ ಆಲೋಚನೆಯು ಅವಳಿಂದ ಹೊರಟಿತೋ, ಅಥವಾ ಅವಳ ಪ್ರೇಮಕ್ಕೆ ಪಾತ್ರನಾದ ಕೊಲೆಗಡಕನಿಂದ ಹೊರಟಿತೋ ಎಂಬದನ್ನು ಈಗಲೇ ಹೇಳಲಿಕ್ಕೆ ಬರುವಂತೆ ಇಲ್ಲ. ಇನ್ನು ಕಮಲಾಬಾಯಿಯ ಪ್ರೀತಿಗೆ ಪಾತ್ರನಾದ ಗೃಹಸ್ಥನನ್ನು ಹುಡುಕುವದೊಂದೇ ಕೆಲಸವು ಅವರಿಗೆ ಉಳಿಯಿತು.

ಕೆಲಹೊತ್ತಿನಮೇಲೆ ಆ ಕೆಲಸಕ್ಕಾಗಿ ಇಬ್ಬರೂ ಟೊಂಕಾಕಟ್ಟಿ ಹೊರಟರು. ದಾರೀಹಿಡಿದು ಹೋಗುವಕಾಲಕ್ಕೆ ಅವರಿಬ್ಬರ ತಲೆಯಲ್ಲಿಯೂ ಇದೇ ವಿಚಾರವು ನಡೆದಿತ್ತು. ಕೆಲಹೊತ್ತಿನಮೇಲೆ ಗಣಪತರಾಯನು ಮುರಾರಿಪಂತನನ್ನು ಕುರಿತು— "ಇನ್ನು ಮೇಲೆ ಆ ಗೃಹಸ್ಥನು ಸಿಗುವದು ಕಠಿಣವಲ್ಲ. ಕೊಲೆಯಾಗಿ ಇಂದಿಗೆ ಮೂರು ದಿವಸಗಳಾದವು. ಈಗ ಆ ಗೃಹಸ್ಥನು ಕಮಲಾಬಾಯಿಯ ಮನೆಗೆ ಬರಲಿಕ್ಕೆ ಹೆದರಲಿಕ್ಕಿಲ್ಲ; ನಾಲ್ಕಾರು ದಿವಸಗಳ

ಮೇಲಂತೂ ಬಂದೇ ಬರುವನು. ನೀವು ಹೇಗಾದರೂ ಕಮಲಾಬಾಯಿಯ ಮನೆಯಮೇಲೆ ಲಕ್ಷ್ಯವಿಡುವದಕ್ಕಾಗಿ ಒಬ್ಬ ಮನುಷ್ಯನನ್ನು ಇಟ್ಟೇ ಇಟ್ಟಿರುವಿರಿ. ಅವನಿಗೆ ಇನ್ನೂ ಕೆಲವು ದಿವಸಗಳ ವರೆಗೆ ದಕ್ಷತೆಯಿಂದ ಕಾಯಲಿಕ್ಕೆ ಹೇಳಬೇಕು. ಹೀಗೆ ಮಾಡುವದರಿಂದ ಆ ಗೃಹಸ್ಥನು ನಮ್ಮ ಕೈಗೆ ಸಿಗುವದು ಕಠಿಣವಾಗಲಿಕ್ಕಿಲ್ಲ, ಎಂದು ಅಂದನು.

ಗಣಪತರಾಯನ ಮಾತು ಕೇಳಿ, ಮುರಾರಿಪಂತನು ಅಂದದ್ದು— ನಿಮ್ಮ ಹಂಚಿಕೆಯು ಚೆನ್ನಾಗಿದೆ; ಆದರೆ ಸದ್ಯಕ್ಕೆ ಅದರ ಉಪಯೋಗವಿಲ್ಲ. ಯಾಕಂದರೆ, ಈ ಕೆಲಸದಲ್ಲಿ ಇಷ್ಟು ಆಲಸ್ಯವನ್ನು ಮಾಡಿದರೆ ಕಡೆಗೆ ಪಶ್ಚಾತ್ತಾಪವಾಗುವದು. ಹಂಚು ಕಾದಿರುವಾಗಲೇ ಒಕ್ಕರಿಗಳನ್ನು ಸುಟ್ಟುಕೊಳ್ಳಬೇಕು. ನೀವು "ಡಿಟೆಕ್ಟಿವ್ಹ" ಜನರ ಕೆಲಸವನ್ನು ಚೆನ್ನಾಗಿ ಮಾಡಬಲ್ಲಿರೆಂದು ಎರಡೇ ದಿವಸಗಳಲ್ಲಿ ನನಗೆ ಖಾತ್ರಿ ಮಾಡಿಕೊಟ್ಟಿರಿ. ಹೆಚ್ಚು ಹೆಚ್ಚು ಅನುಭವವು ಬಂದಂತೆ ನಿಮ್ಮಿಂದ ಸಣ್ಣ ಸಣ್ಣ ತಪ್ಪುಗಳು ಸಹ ಆಗಲಿಕ್ಕಿಲ್ಲ. ಈ ಪ್ರಸಂಗದಲ್ಲಿ ಏನು ಮಾಡಬೇಕೆಂಬದನ್ನು ನಿಮಗೆ ಹೇಳುತ್ತೇನೆ, ಕೇಳಿರಿ. ಕಮಲಾಬಾಯಿಯು, ಆಡಿದ ಎಲ್ಲ ಮಾತುಗಳನ್ನಂತೂ ನೀವು ಕೇಳಿರುವಿರಿ. ಅವುಗಳೊಳಗಿನ ಒಂದೆರಡು ಶಬ್ದಗಳಿಂದ ಕೊಲೆ ಮಾಡಿದ ಮನುಷ್ಯನನ್ನು ಹಿಡಿಯುವದು ನಿಮಗೆ ಗೊತ್ತಾಗುವ ಹಾಗಿದೆ. ನೀವು ಅವುಗಳನ್ನು ಯಾಕೆ ಉಪಯೋಗಿಸುವದಿಲ್ಲ?

ಗಣಪತರಾಯ—ಅಂದರೆ, ನೀವು ಆಡಿದ ಮಾತಿನ ಅರ್ಥವೇ ನನಗೆ ಆಗಲಿಲ್ಲ.

ಮುರಾರಿ—ಈ ಕೆಲಸದಲ್ಲಿ ನಾಯಿಯು ಚೆನ್ನಾಗಿ ಉಪಯೋಗಕ್ಕೆ ಬರುವದು.

ಗಣ—ಅದು ಹೇಗೆ?

ಮುರಾರಿ—ಇಗೋ, ಇದೇ ಈಗ ಮೂರು ಗಂಟೆಯಾಯಿತು. ಇದೇ ಕಾಲಕ್ಕೆ ಕಮಲಾಬಾಯಿಯು ಮ್ಯಾಜಿಸ್ಟ್ರೇಟ ಕೋರ್ಟಿಗೆ ಹೋಗತಕ್ಕವಳು. ಅವಳು ಹೊರಗೆ ಹೋದಳೆಂದರೆ, ಮನೆಯಲ್ಲಿ ಆಗ ಭೆಟ್ಟಿಯಾದ ಪೋರನು ಇರುವನು. ಈ ಸಂಧಿಯಲ್ಲಿ ಅವರ ಮನೆಗೆ ಹೋದರೆ, ನಮ್ಮ ಕಾರ್ಯವು ಸಾಧ್ಯವಾಗುವದು. ನಡೆಯಿರಿ ಹೋಗೋಣ.

ಗಣ—ಮುರಾರಿಪಂತರೆ, ನಿಮ್ಮ ಮಾತಿನ ಭಾವವೇ ನನಗೆ ತಿಳಿಯ ಲಿಲ್ಲ, ಸ್ಪಷ್ಟವಾಗಿ ಹೇಳಿರಿ, ಎಂದು ಹಲವು ಬಗೆಯಿಂದ ಹಂಬಲಿಸಿ ಕೇಳಿ ಕೊಂಡರೂ ಮುರಾರಿಪಂತನು ಅವರ ಕಡೆಗೆ ಲಕ್ಷ್ಯಕೊಡದೆ, ತನ್ನ ನಿತ್ಯದ ನಡಿಗೆಯಿಂದ ಪಾಲವರೋಡದ ಹಾದೀ ಹಿಡಿದು ನಡೆದನು. ಅದರಿಂದ ಗಣ ಪತರಾಯನಾದರೂ ಸುಮ್ಮನೆ ಅವನ ಬೆನ್ನು ಹತ್ತಬೇಕಾಯಿತು.

ಅವರು ವಿಶ್ವಾಸರಾಯನ ಅಂಗಡಿಗೆ ಬರುವಷ್ಟರಲ್ಲಿ ಅವರ ಅಂಗಡಿಯ ಮುಂದೆ ಒಂದು "ವ್ಹಿಕ್ಟೋರಿಯಾ" ಗಾಡಿಯು ನಿಂತಿತ್ತು; ಕಮಲಾ ಬಾಯಿಯು ಶಾಲು ಹೊದ್ದುಕೊಂಡು ಅದೇ ಮನೆಯಿಂದ ಹೊರಬೀಳುತ್ತಿದ್ದಳು. ಅವಳು ಗಾಡಿಯಲ್ಲಿ ಕುಳಿತ ಕೂಡಲೆ, ಗಾಡಿಯವನು ಕುದುರೆಗಳಿಗೆ ಚಬಕವನ್ನು ಹೊಡೆದು ಓಡಿಸಿದನು. ಗಾಡಿಯು ಕೆಲವು ದೂರ ಹೋದ ಮೇಲೆ, ಮುರಾರಿಪಂತನೂ, ಗಣಪತರಾಯನೂ ವಿಶ್ವಾಸರಾಯನ ಮನೆ ಯನ್ನು ಹೊಕ್ಕರು. ಮೊದಲು ಮುರಾರಿಪಂತನು ತರ್ಕಿಸಿದಂತೆ ಮನೆಯಲ್ಲಿ ಆ ಪೋರನು ಮಾತ್ರ ಇದ್ದನು. ಅವನನ್ನು ಕಂಡು ಮುರಾರಿಪಂತನು— ಎಲಾ, ಕಮಲಾಬಾಯಿಯವರು ಮನೆಯಲ್ಲಿರುವರೇನೋ? ಎಂದು ಕೇಳಿದನು.

ಹುಡುಗ—ಅವರು ಇದೇ ಈಗ ಹೊರಗೆ ಹೋದರು.

ಗಣಪತ—ಹೊರಗೆ ಹೋದರೋ? ಲುಚ್ಚ್ಯಾ ಸುಳ್ಳಾಡುತ್ತೀ; ಅವರು ಒಳಗೆ ಇರುತ್ತಿರಲಿಕ್ಕೆ, ಸುಳ್ಳೇ ಹೊರಗೆ ಹೋದರೆಂದು ಹೇಳುತ್ತೀ? ಹೋಗು, ಅವರನ್ನು ಹೊರಗೆ ಕರೆ. ಅವರ ಕಡೆಗೆ ನನ್ನ ಅತಿ ತ್ವರೆಯ ಕೆಲಸವುಂಟು, ಎಂದು ಜಬರಿಸಿ ಹೇಳಿದನು.

ಹುಡುಗ—ನಾನು ನಿಮಗೆ ಸುಳ್ಳು ಹೇಳುವದಿಲ್ಲ. ಅವರು ಇದೇ ಈಗ ನಿಜವಾಗಿ ಹೊರಗೆ ಹೋದರು. ಅವರು ಹೋದ ಕೂಡಲೆ ನೀವು ಬಂದಿರಿ.

ಅದನ್ನು ಕೇಳಿ ಮುರಾರಿಪಂತನು ತನಗೆ ಬಹಳ ವಿಷಾದವಾಯಿತೆಂಬಂತೆ ನಟಿಸಿ, ಆ ಹುಡುಗನನ್ನು ಕುರಿತು—ಎಲಾ ತಮ್ಮಾ, ಕಮಲಾಬಾಯಿಯ ವರು ನನಗೆ ಒಬ್ಬ ಗೃಹಸ್ಥನ ಭೆಟ್ಟೀ ತೆಗೆದುಕೊಳ್ಳಲಿಕ್ಕೆ ಹೇಳಿದ್ದರು. ಆ ಗೃಹಸ್ಥನು ಇಂಥಲ್ಲೇ ಇರುವನೆಂದು ಸಹ ಅವರು ನನಗೆ ಹೇಳಿದ್ದರು; ಆದರೆ ನಾನು ಅದನ್ನು ಇಷ್ಟರಲ್ಲಿ ಮರೆತೆನು. ಅದಕ್ಕಾಗಿ ಅವರನ್ನು ಇನ್ನೊಮ್ಮೆ ವಿಚಾರಿಸಿ ತಿಳಕೊಳ್ಳಬೇಕೆಂದು ಬಂದಿದ್ದೆನು. ಆದರೆ ಆ ಬಗ್ಗೆ ನಿನಗೇನಾದರೂ

ಗೊತ್ತುಂಟೊ?

ಹುಡುಗ—ಆ ಗೃಹಸ್ಥನ ಹೆಸರು ಹೇಳಿದರೆ, ಅವನು ಇರುವ ಸ್ಥಳವನ್ನು ನಾನು ಹೇಳೇನು.

ಮುರಾರಿ—ಹೆಸರು ಸಹ ನನಗೆ ಮರೆತು ಹೋಗಿದೆ. ಹೆಸರಾದರೂ ಲಕ್ಷದಲ್ಲಿದ್ದಿದ್ದರೆ ಒಳ್ಳೇದಾಗುತ್ತಿತ್ತು. ಆ ಗೃಹಸ್ಥನು ನಿನ್ನ ಗುರುತಿನವನೇ ಇರುವನು. ಅವನು ಮೇಲಿಂದಮೇಲೆ ಇಲ್ಲಿಗೆ ಬರುವನು. ಈ ನಾಯಿಯು ಅವನಿಗೆ ಈಲಾಗಿರುತ್ತದಂತೆ, ತಿಳಿಯಿತೇ? ಈಗ ಅವನು ಯಾರೆಂಬದು, ಗೊತ್ತಾಯಿತೇ?

ಹುಡುಗ—ಆಹಾ! ಗೊತ್ತಾಯಿತು. ಅವರು ಜಾಧವಆನಂದರಾಯರಾಗಿರಬಹುದು.

ಮುರಾರಿ—ಅಕೋ, ಅವರೇ ನೋಡು, ನನಗೆ ಈಗ ನೆನಪಾಯಿತು. ಆ ಆನಂದರಾಯರು ಎಲ್ಲಿರುತ್ತಾರೆ? ಮತ್ತು ಯಾವ ಉದ್ಯೋಗವನ್ನು ಮಾಡುತ್ತಿರುವರು? ನಿನಗೆ ಗೊತ್ತಿದ್ದರೆ ಹೇಳು.

ಹುಡುಗ—ಅವರಾದರೂ ನಮ್ಮ ಯಜಮಾನರಂತೆ ಖೊಟ್ಟಿ ಹರಳು ಕಲ್ಲಿನ ಒಂದು ಅಂಗಡಿಯನ್ನು ಹಾಕಿರುವರು. ಮೊದಮೊದಲು ಇಬ್ಬರೂ ಕೂಡಿಯೇ ವ್ಯಾಪಾರಮಾಡುತ್ತಿದ್ದರು. ಆದರೆ ಮೊನ್ನಿನ ಯುಗಾದಿಯಿಂದ ಅವರು ಬೇರೆಯಾಗಿರುವರು. ಅವರಿಗೂ ನಮ್ಮ ಯಜಮಾನರಿಗೂ ಬಹಳ ಸ್ನೇಹ, ಅವರು ಇಲ್ಲಿಗೆ ದಿನಾಲು ಬಂದೇ ಬರುವರು. ನಿನ್ನಿಸಿಂದ ಮಾತ್ರ ಅವರು ಇತ್ತಕಡೆಗೆ ಬಂದದ್ದನ್ನು ನೋಡಿಲ್ಲ.

ಮುರಾರಿ—ಅವರ ಅಂಗಡಿಯು ಎಲ್ಲಿಯದೆ?

ಹುಡುಗ—ರಾಮವಾಡಿಯ ನಾಕೇದಹತ್ತರ ಗೋಂಧಳೇಕರ ಇವರ ಪುಸ್ತಕ ಮಾರುವ ಅಂಗಡಿಯುಂಟು. ಅದರ ಮೇಲ್ಮಾಳಿಗೆಯಲ್ಲಿ ಆನಂದ ರಾಯರ ಅಂಗಡಿ ಇರುತ್ತದೆ.

ಮುರಾರಿ—ಶಾಬಾಸ! ಚೆನ್ನಾಗಿ ಹೇಳಿದೆ! ಇಕೋ ನಿನಗೆ ಖುಷೀ ಕೊಡುತ್ತೇನೆಂದು ಕಿಸೆಯೊಳಗಿಂದ ಒಂದು ಚವಲಿಯನ್ನು ತೆಗೆದು ಆ ಹುಡುಗನಿಗೆ ಕೊಟ್ಟನು.

ಈ ಪ್ರಕಾರ ಮುರಾರಿಪಂತನು ಆ ಹುಡುಗನನ್ನು ವೋಸಗೊಳಿಸಲಿಕ್ಕೆ

ಮಾಡಿದ ಹಂಚಿಕೆಯನ್ನು ಕಂಡು ಗಣಪತರಾಯನಿಗೆ ಬಹಳ ಅಶ್ಚರ್ಯವಾಯಿತು. ವಿಶ್ವಾಸರಾಯನ ಮನೆಯಿಂದ ಇಬ್ಬರೂ ಹೊರಟಮೇಲೆ ಗಣಪತರಾಯನು ಅವನ ಬುದ್ಧಿ ಚಾತುರ್ಯದ ಅಭಿನಂದನವನ್ನು ಮಾಡಿದನು.

———(೦)———

೧೦ನೆಯ ಪ್ರಕರಣ.

## ಆನಂದರಾಯನನ್ನು ವಾರಂಟನಿಂದ ಹಿಡಿದರು.



ಹಾದೀ ನಡೆಯುತ್ತಿರುವಾಗ, ಈಗಲೇ ಹೋಗಿ ಆನಂದರಾಯನನ್ನು ಯಾಕೆ ಹಿಡಿಯಬಾರದೆಂದು ಗಣಪತರಾಯನು ಮುರಾರಿಪಂತನನ್ನು ಕೇಳದನು. ಆದರೆ ಅವನು ಹಾಗೆ ಮಾಡಲಿಕ್ಕೆ ಬರುವದಿಲ್ಲವೆಂದು ಹೇಳಿದನು; ಯಾಕಂದರೆ, ಎಲ್ಲ ಕೆಲಸವು ಕಾಯದೆಯಂತೆ ಆಗಬೇಕಾಗುತ್ತದೆ. ಮ್ಯಾಜಿಸ್ಟ್ರೇಟರ ವಾರಂಟು ಇಲ್ಲದೆ ಅವನನ್ನು ಹಿಡಿಯಲಿಕ್ಕೆ ಬಾರದು. ಆದ್ದರಿಂದ ನಾವು ಮೊದಲು ಮ್ಯಾಜಿಸ್ಟ್ರೇಟ ಕೋರ್ಟಿಗೆ ಹೋಗಿ ಆನಂದರಾಯನ ಮೇಲೆ ವಾರಂಟು ತೆಗಿಸಿ, ತರಬೇಕು. ಆದರೆ ಈ ಸುದ್ದಿಯು ಆನಂದರಾಯನಿಗೆ ಹತ್ತಿ, ಅವನು ಎಲ್ಲಿಯಾದರೂ ಓಡಿಹೋದರೆ ಏನು ಮಾಡತಕ್ಕದ್ದು? ಎಂಬ ಸಂಶಯವು ಅವನ ಮನಸ್ಸಿನಲ್ಲಿ ಹುಟ್ಟಿತು. ಅದರ ಬಗ್ಗೆ ತಕ್ಕ ವ್ಯವಸ್ಥೆಯನ್ನು ಮಾಡುವದು ಅವಶ್ಯವೆಂದು ಯೋಚಿಸಿ ಒಮ್ಮೆ ಸೀಳ್ಳು ಹಾಕಿದನು. ಕೂಡಲೆ ಒಬ್ಬ ಸಾದಾಪೋಷಾಕಿನ ಸಿಪಾಯಿಯು ಮುರಾರಿಪಂತನ ಬಳಿಗೆ ಬಂದನು. ಆ ಸಿಪಾಯಿಗೆ ಮುರಾರಿಪಂತನು ಏನೋ ಕೆಲವು ಕಿವಿಮಾತುಗಳನ್ನು ಹೇಳಿ ಕಳಿಸಿಕೊಟ್ಟನು. ಬಳಿಕ ಮುರಾರಿಪಂತನು ಗಣಪತರಾಯನಿಗೆ—ನಡೆಯಿರಿ, ಇನ್ನು ವ್ಯರ್ಥವಾಗಿ ವೇಳೆ ಕಳೆಯುವಂತಿಲ್ಲ. ಬೇಗನೆ ಕೋರ್ಟಿಗೆ ಹೋಗೋಣ, ಇಕೋ ಟ್ರಾಮಗಾಡಿ ಬಂತು; ಎಂದನು.

ಕೂಡಲೆ ಇಬ್ಬರೂ ಟ್ರಾಮಗಾಡಿಯನ್ನು ಏರಿದರು. ಈ ಖಟ್ಲೆಯ ವಿಚಾರಣೆಯನ್ನು ಮಾಡುತ್ತಿದ್ದ ಮಾಜಿಸ್ಟ್ರೇಟರ ಕಚೇರಿಯು, ಮನಿಸ್ಕೂಲಿನಿಂದ ಬೋರೀಬಂದರದ ಕಡೆಗೆ ಹೋಗುವ ದಾರಿಯಮೇಲೆ ಇತ್ತು. ಹತ್ತು ಹನ್ನೆರಡು ಮಿನೀಟುಗಳಲ್ಲಿ ಟ್ರಾಮಗಾಡಿಯು ಆ ಕೋರ್ಟಿಗೆ ಬಂದಿತು.

ಮುರಾರಿಪಂತನೂ ಗಣಪತರಾಯನೂ ಟ್ರಾಮುಗಾಡಿಯಿಂದಿಳಿದು, ಮ್ಯಾಜಿಸ್ಟ್ರೇಟರ ಚೇಂಬರದಲ್ಲಿ ಹೋಗಿ ಕುಳಿತರು. ಮುರಾರಿಪಂತನು ಪಾಹರೇದ ಮೇಲಿರುವ ಸಿಪಾಯಿಯ ಕೈಯಲ್ಲಿ ಸೀಸಪೇನಿಸಿಲಿನಿಂದ ಬರೆದ ಒಂದು ಚೀಟಿಯನ್ನು ಕೊಟ್ಟು ಮ್ಯಾಜಿಸ್ಟ್ರೇಟರ ಕಡೆಗೆ ಕಳಿಸಿದನು. ಮ್ಯಾಜಿಸ್ಟ್ರೇಟ ಸಾಹೇಬರು ಆಗ ಖಟ್ಲೆ ವಿಚಾರಣೆಯಲ್ಲಿ ತೊಡಗಿದ್ದರು. ಕಮಲಾಬಾಯಿಯ ಸಾಕ್ಷಿಯು ನಡೆದಿತ್ತು. ಮ್ಯಾಜಿಸ್ಟ್ರೇಟರು ಮುರಾರಿಪಂತನ ಚೀಟಿಯನ್ನು ನೋಡಿದ ಕೂಡಲೆ, ಖಟ್ಲೆಯನ್ನು ಅಷ್ಟಕ್ಕೇನಿಲ್ಲಿಸಿ, ಅವನು ಕೂತಲ್ಲಿಗೆ ಬಂದರು. ಆಗ ಮುರಾರಿಪಂತನು ಯಾವತ್ತು ವೃತ್ತಾಂತವನ್ನು ಮ್ಯಾಜಿಸ್ಟ್ರೇಟ ಸಾಹೇಬರಿಗೆ ನಿವೇದನಮಾಡಿ, ಆನಂದರಾಯನನ್ನು ಹಿಡಿಯಲಿಕ್ಕೆ ಈಗಿಂದೀಗಲೇ ವಾರಂಟು ಕೊಡಿರೆಂದು ಕೇಳಿದನು. ಮ್ಯಾಜಿಸ್ಟ್ರೇಟಸಾಹೇಬರಿಗೆ ಆ ವೃತ್ತಾಂತವನ್ನು ಕೇಳಿ ಸಮಾಧಾನವಾಗಲಿಲ್ಲ. ಅವರು ವಾರಂಟು ಸಹಿಮಾಡಿಕೊಡಲಿಕ್ಕೆ ಹಿಂದುಮುಂದು ನೋಡಹತ್ತಿದರು. ಈ ಅಪನಂಬಿಗೆಯು ಮ್ಯಾಜಿಸ್ಟ್ರೇಟನನ್ನು ಕಂಡು, ಮುರಾರಿಪಂತನಂತೆ ಗಣಪತರಾಯನಿಗೂ ಬಹಳ ಆಶ್ಚರ್ಯವಾಯಿತು. ಕಡೆಗೆ ಮುರಾರಿಪಂತನು ಸಿಟ್ಟಿನ ಆವೇಶದಿಂದ—ಸಾಹೇಬರೇ. ನೀವು ವಾರಂಟು ಕೊಡದಿದ್ದರೆ ಆನಂದರಾಯನು ಕೈಗೆ ಹತ್ತುವದಿಲ್ಲ. ಅಪರಾಧಿಯನ್ನು ಬಿಟ್ಟುಕೊಟ್ಟು ನಿರಪರಾಧಿಯನ್ನು ಶೂಲಕ್ಕೇರಿಸಿದಂತೆ ಮಾತ್ರ ಆಗುವದು. ಈ ಬಗ್ಗೆ ನನ್ನ ಮಾತಿನ ಪೂರ್ಣ ವಿಚಾರಮಾಡಿರಿ. ಆನಂದರಾಯನು ತಪ್ಪಿಸಿಕೊಂಡು ಓಡಿಹೋದರೂ ಚಿಂತೆಯಿಲ್ಲ, ಆದರೆ ಈ ಬಡಪ್ರಾಣಿ ವಿಶ್ವಾಸರಾಯನು ಮಾತ್ರ ಸುಮ್ಮನೆ ಜೀವಕ್ಕೆ ಎರವಾದಾನು. ಇಷ್ಟೇ ನನ್ನ ಅಭಿಪ್ರಾಯವಿರುತ್ತದೆ, ಎಂದು ಹೇಳಿದನು.

ಮುರಾರಿಪಂತನು ಬುದ್ಧಿವಂತನಾದ ಡಿಟೆಕ್ಟೀವ್ಹ ಅಮಲದಾರನಿರುವನೆಂಬದು ಮ್ಯಾಜಿಸ್ಟ್ರೇಟಸಾಹೇಬರಿಗೆ ಗೊತ್ತಿತ್ತು; ಮತ್ತು ಎಷ್ಟೋ ಅನುಭವದಿಂದ ಅವನ ಕೆಲಸ ಮಾಡುವ ಪದ್ಧತಿಯು ನಿರ್ದೋಷವಾದದ್ದೆಂದು ಮನಗಂಡದ್ದರಿಂದ ಅವನ ಆವೇಶಯುಕ್ತವಾದ ಭಾಷಣವನ್ನು ಕೇಳಿ, ಮ್ಯಾಜಿಸ್ಟ್ರೇಟರು ತಿರುಗಿ ಮಾತಾಡದೆ, ವಾರಂಟಿನ ಮೇಲೆ ಸಹಿಮಾಡಿ ಅದನ್ನು ಮುರಾರಿಪಂತನ ಸ್ವಾಧೀನಮಾಡಿದರು. ವಾರಂಟು ಕೈಗೆ ಸಿಕ್ಕಕೂಡಲೇ

ಮುರಾರಿಪಂತನೂ ಗಣಪತರಾಯನೂ ಕೋರ್ಟಿನಿಂದ ಹೊರಬಿದ್ದು, ಟ್ರಾಮುಗಾಡಿಯ ಹಾದೀನೋಡದೆ, ಒಂದು ವ್ಹಿಕ್ಟೋರಿಯಾ ಗಾಡಿಯನ್ನು ಬಾಡಿಗೆಯಿಂದ ಗೊತ್ತುಮಾಡಿಕೊಂಡು, ಆನಂದರಾಯನ ಅಂಗಡಿಯ ಕಡೆಗೆ ತೆರಳಿದರು. ತುಸುಹೊತ್ತಿನಲ್ಲಿ ಅವರು ರಾಮವಾಡಿಯ ನಾಕೇಕ್ಕೆ ಬಂದು ಮುಟ್ಟಿದರು. ಗೊಂಧಳೇಕರನ ಪುಸ್ತಕದ ಅಂಗಡಿಯೂ ಬಂತು. ಅಲ್ಲಿ ಅವರು ಗಾಡಿಯೊಳಗಿಂದ ಇಳಿದು, ಆ ಅಂಗಡಿಯ ಅಟ್ಟದಮೇಲಿರುವ ಖೊಟ್ಟಿ ರತ್ನದ ಅಂಗಡಿಯು ಆನಂದರಾಯನದೇ ಎಂಬ ಬಗ್ಗೆ ಕೇಳಿ ಖಾತ್ರಿ ಮಾಡಿಕೊಂಡರು. ಆ ಅಂಗಡಿಯಲ್ಲಿ ಒಬ್ಬ ೩೦-೩೫ ವರ್ಷದ ಗೃಹಸ್ಥನು ಗಿರಾಕಿಗಳಿಗೆ ಮಾಲು ಕೊಡುವದರಲ್ಲಿ ತಲ್ಲೀನನಾಗಿದ್ದನು. ಗಿರಾಕಿಗಳು ಇರುವಾಗಲೇ ವಾರಂಟು ಲಾಗು ಮಾಡುವದು ಮುರಾರಿಪಂತನ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಅವನು ಅಲ್ಲೇನಿಂತು ಅಂಗಡಿಯನ್ನು ಸೂಕ್ಷ್ಮದೃಷ್ಟಿಯಿಂದ ನಾಲ್ಕೂಕಡೆಗೆ ನೋಡಿದನು. ಆಗ ಅವನ ಮುಖ ಮುದ್ರೆಯಿಂದ ಅವನಿಗೆ ಸಮಾಧಾನವೆನಿಸಿದಂತೆ ತೋರುತ್ತಿತ್ತು. ಅನಂತರ ಅವರಿಬ್ಬರು ಆನಂದರಾಯನ ಅಂಗಡಿಯಕಡೆಗೆ ಲಕ್ಷವಿಟ್ಟು ದಾರಿಯಲ್ಲಿ ಓಡ್ಯಾಡಹತ್ತಿದರು. ಅದರಿಂದ ಆನಂದರಾಯನು ಅವರ ಕಣ್ಣು ತಪ್ಪಿಸಿ ಹೊರಗೆ ಹೋಗುವ ಸಂಭವವೇ ಇದ್ದಿಲ್ಲ.

ಅದೇ ಅಂಗಡಿಯ ಎದುರಿಗೆ ಡಾ. ಘಾರಪುರೆ, ಎಲ್.ಎಮ್.ಆ್ಯಂಡ ಎಸ್. ಇವರ ದವಾಖಾನೆಯು ಇತ್ತು. ಅವರು ಕಾಲೇಜದಲ್ಲಿರುವಾಗ ಗಣಪತರಾಯನ ಕ್ಲಬ್ಬಿನಲ್ಲಿಯೇ ಉಣ್ಣುತ್ತಿದ್ದರು. ಆದಕಾರಣ ಅವರಿಗೆ ಗಣಪತರಾಯನ ಪರಿಚಯವು ಇತ್ತು. ಗಣಪತರಾಯನ ಲಕ್ಷವೆಲ್ಲ ಆನಂದರಾಯನ ಕಡೆಗೇ ಹತ್ತಿದ್ದಕಾರಣ, ಇಲ್ಲಿಯೇ ಡಾ. ಘಾರಪುರೆ, ಇವರ ದವಾಖಾನೆಯದೆ ಎಂಬದು ಅವನ ಸ್ಮರಣದಲ್ಲಿ ಉಳಿಯಲಿಲ್ಲ. ಮುರಾರಿಪಂತನೂ ಗಣಪತರಾಯನೂ ಆನಂದರಾಯನ ಅಂಗಡಿಯ ಎದುರಿಗೆ ನಿಂತು ಮೂರು ನಾಲ್ಕು ಮಿನೀಟು ಆದಮೇಲೆ, ಡಾ. ಘಾರಪುರೆ ಇವರು ರೋಗಿಯ ಕಣ್ಣು ಪರೀಕ್ಷಿಸುವದಕ್ಕಾಗಿ ದವಾಖಾನೆಯ ಹೊರಗೆ ಬೆಳಕಿಗೆ ಬಂದರು. ಆಗ ಅವರ ಲಕ್ಷವು ಗಣಪತರಾಯನ ಕಡೆಗೆ ಹೋಯಿತು. ಕೂಡಲೆ ಅವರು ಗಣಪತರಾಯನನ್ನು ಹೆಸರುಗೊಂಡು ಕರೆದರು. ಆಗ ಗಣಪತರಾಯನು

ಮುರಾರಿಪಂತನಿಗೆ ಹೋಗಿಬರುವೆನೆಂದು ಕಣ್ಣುಸನ್ನೆಯಿಂದ ತಿಳಿಸಿ, ದವಾಖಾನೆಯ ಒಳಗೆ ಹೊಕ್ಕನು. ಡಾಕ್ಟರರೂ ಅವರ ಬೆನ್ನ ಹಿಂದಿಂದೇ ಒಳಗೆ ಹೋದರು. ಡಾಕ್ಟರರು ಖುರ್ಚಿಯ ಹತ್ತರವೇ ಇಟ್ಟಿದ್ದ ಮತ್ತೊಂದು ಖುರ್ಚಿಯಮೇಲೆ ಗಣಪತರಾಯನು ಕುಳಿತುಕೊಂಡನು. ಡಾಕ್ಟರರು 'ಪ್ರಿಸ್ಕ್ರಿಪ್ಶನ್, ಬರೆಯತೊಡಗಿದರು. ಗಣಪತರಾಯನು ಅಲ್ಲಿಯೇ ಮೇಜಿನ ಮೇಲೆ ಇಟ್ಟಿದ್ದ "ಬರ್ಡ್ಸಆಯ" ಡಬ್ಬಿಯೊಳಗಿನ ತಂಬಾಕವನ್ನು ತೆಗೆದು ಅದರದೊಂದು ಚುಟ್ಟಾ ಕಟ್ಟಿ ಸೇದಹತ್ತಿದನು. ಡಾಕ್ಟರರ ಮೇಜಿನ ಎದುರಿಗೆ ಕಂಪೌಂಡಿಂಗ ಟೇಬಲು ಇತ್ತು. ಅದರ ಒಂದು ಬದಿಗೆ ಇಟ್ಟಿದ್ದ ಸ್ಟೂಲಿನ ಮೇಲೆ ಅವರ ಕಂಪೌಂಡರನು ಕುಳಿತಿದ್ದನು. ಮತ್ತು ಸಿದ್ಧ ಮಾಡಿದ ರಸಾಯನವನ್ನು ಹಾಕಿದ ಬಾಟ್ಲಿಯ ಬಾಯಿಗೆ ಒಂದು ಬೂಚು ಸಾಲದ್ದರಿಂದ ಅದನ್ನು ಕೆತ್ತಿ ಸಣ್ಣಮಾಡುತ್ತಿದ್ದನು. ಚುಟ್ಟಾ ಸೇದುತ್ತಿದ್ದ ಗಣಪತರಾಯನ ದೃಷ್ಟಿಯು ಕೆತ್ತಿಬಿದ್ದ ಬೂಚಿನ ತುಣುಕುಗಳ ಕಡೆಗೆ ಹೋಯಿತು. ಅದರೊಳಗೆ ಹಸರು ಅರಗಿನ ಕೆಲವು ತುಣುಕುಗಳನ್ನು ಅವನು ಕಂಡನು. ಆಗ ಅವನ ಮನಸ್ಸಿನಲ್ಲಿ ಏನೋ ವಿಚಾರಗಳು ಹುಟ್ಟಿ ತಾನು ಕುಳಿತ ಸ್ಥಳದಿಂದ ಚಟ್ಟನೆ ಎದ್ದು, ಕಂಪೌಂಡರನ ಬಳಿಗೆ ಬಂದು ನೋಡಲು, ಆ ಕಂಪೌಂಡರನ ಹತ್ತರ ಮೇಜಿನಮೇಲೆ ಒಂದು ಕಾಗದದ ಪೆಟ್ಟಿಗೆಯೊಳಗೆ ಅಂಥ ಹಸರು ಅರಗಿನ ೧೦–೧೨ ಬೂಚುಗಳು ಇದ್ದದ್ದು ಅವನ ದೃಷ್ಟಿಗೆ ಬಿದ್ದವು. ಅವು ಕೊಲೆಯಾದ ಕೋಣೆಯಲ್ಲಿ ಸಿಕ್ಕ ಬೂಚಿನಂಥವೇ ಇದ್ದವು; ಆಗ ಗಣಪತರಾಯನು ಕಂಪೌಂಡರನನ್ನು ಕುರಿತು—ಇವನ್ನು ನೀವು ಮಾರಲಿಕ್ಕೆ ಕೊಡುತ್ತೀರೇನು? ಎಂದು ಕೇಳಿದನು.

ಕಂಪೌಂಡರ—ಅಹುದು, ನಾವು ಇವುಗಳನ್ನು ದುಡ್ಡಿಗೆ ಎರಡರಂತೆ ಮಾರುತ್ತಿರುತ್ತೇವೆ.

ಗಣಪತರಾಯ—ಎರಡುಮೂರು ದಿವಸಗಳ ಹಿಂದೆ ಇವುಗಳಲ್ಲಿ ಕೆಲವು ಬೂಚುಗಳನ್ನು ಯಾರಾದರೂ ಮಾರಲಿಕ್ಕೆ ಒಯ್ದರೇನು?

ಕಂಪೌಂಡರ—ಅಹುದು, ಎದುರಿಗಿನ "ಅಂಗಡಿಕಾರನಾದ ಆನಂದರಾಯನು ಮೊನ್ನೆ ಇದೇ ಹೊತ್ತಿಗೆ ದುಡ್ಡಿಗೆ ಎರಡು ಬೂಚುಗಳನ್ನು ಕೊಂಡುಕೊಂಡನು. ಆನಂದರಾಯನು ನಮ್ಮ ನೆರೆಯವನಾದ ಕಾರಣ

ನಮ್ಮ ಡಾಕ್ಟರರು ಅವನಿಂದ ದುಡ್ಡು ತೆಗೆದುಕೊಳ್ಳಲಿಲ್ಲ. ಆದರೂ ಅವನು ಕಟ್ಟಕಡೆಗೆ ಮೇಜಿನ ಮೇಲೆ ದುಡ್ಡು ಒಗೆದು ಹೊರಟುಹೋದನು.

ಈ ಮಾತಿನಿಂದ ಗಣಪತರಾಯನಿಗೆ ಆನಂದರಾಯನೇ ಕೊಲೆಗಡಕನೆಂಬ ಬಗ್ಗೆ ಪೂರ್ಣವಾಗಿ ಮನವರಿಕೆಯಾಯಿತು. ಡಾಕ್ಟರರು ಪ್ರಿಸ್ಕ್ರಿಪ್ಶನ್ ಬರೆದಮೇಲೆ ರೋಗಿಯು ಹೊರಟು ಹೋದನು. ತರುವಾಯ ಗಣಪತರಾಯನು ಡಾಕ್ಟರರ ಸಂಗಡ ಮತ್ತೊಂದು ಚುಟ್ಟಾ ಸೇದಿ ಅವರ ಅಪ್ಪಣೆ ಪಡೆದು, ಮುರಾರಿಪಂತನ ಬಳಿಗೆ ಬಂದನು. ಬರುವಾಗ ಅವನು ಕಂಪೌಂಡರನಿಂದ ಒಂದು ಬೂಚು ಇಸಕೊಂಡಿದ್ದನು. ಆಗ ಮುರಾರಿಪಂತನು ಆನಂದರಾಯನನ್ನೇ ದಿಟ್ಟಿಸಿ ನೋಡುತ್ತಿದ್ದನು. ಗಣಪತರಾಯನು ಅವನ ಬಳಿಗೆ ಹೋಗಿ, ಆಸ್ಪತ್ರಿಯಲ್ಲಿ ನಡೆದ ವೃತ್ತಾಂತವನ್ನೆಲ್ಲ ಹೇಳಿದನು. ಮತ್ತು ಬರುವಾಗ ತಂದ ಬೂಚನ್ನು ಅವನಿಗೆ ತೋರಿಸಿದನು. ಕೂಡಲೆ ಮುರಾರಿಪಂತನು ಅದನ್ನು ತನ್ನ ಕಿಸೆಯೊಳಗಿನ ಬೂಚಿಗೆ ಹೋಲಿಸಿ ನೋಡಿದನು. ಇದರಿಂದ ಅವನಿಗಾದ ಆನಂದದ ಭರದಲ್ಲಿ ಅವನು, ತಾನು ಓಣಿಯಲ್ಲಿರುವೆನೆಂಬ ಎಚ್ಚರಿಕೆ ಸಹ ಉಳಿಯದೆ, ಗಟ್ಟಿಯಾಗಿ ಚಪ್ಪಾಳಿಯನ್ನು ಹೊಡೆದನು. ಅಷ್ಟರಲ್ಲಿ ಆನಂದರಾಯನ ಅಂಗಡಿಯಿಂದ ಗಿರಾಕಿಗಳೆಲ್ಲ ತೆರಳಿದರು. ಮುರಾರಿಪಂತನು ಆನಂದದ ಭರದಲ್ಲಿ ಕುಣಿದಾಡುತ್ತ ಆನಂದರಾಯನ ಅಂಗಡಿಗೆ ನಡೆದನು. ಅವರ ಬರೋಣವನ್ನು ಕಂಡು, ಆನಂದರಾಯನು ಎದ್ದು ಹೊರಗೆ ಬಂದು, ಅವರನ್ನು ಒಳಗೆ ಕರಕೊಂಡು ಹೋಗಿ, ಅವರಿಬ್ಬರಿಗೂ ಒಂದೊಂದು ಖುರ್ಚಿಯನ್ನು ಕೊಟ್ಟು ಕೂಡ್ರಿಸಿ, ನಿಮಗೆ ಏನು ಬೇಕು? ಎಂದು ಮುರಾರಿಪಂತನಿಗೆ ಪ್ರಶ್ನೆ ಮಾಡಿದನು. ಯಾಕಂದರೆ, ಅವರಿಬ್ಬರಲ್ಲಿ ಮುರಾರಿಪಂತನ ಪೋಷಾಕವೇ ಗಂಭೀರವಾದದ್ದೂ ಶ್ರೀಮಂತಿಕೆಯದೂ ಆಗಿತ್ತು.

ಮುರಾರಿಪಂತನು ಗಾಂಭೀರ್ಯದಿಂದ—ನಾವು ನಿಮ್ಮ ಅಂಗಡಿಯಲ್ಲಿ ಮಾಲುಕೊಳ್ಳಲಿಕ್ಕೆ ಬಂದವರಲ್ಲ, ನಿಮ್ಮಲ್ಲಿ ನಮಗೆ ಬೇರೊಂದು ಕೆಲಸವುಂಟು.

ಆನಂದರಾಯನು ಸಂಶಯದ ಮುದ್ರೆಯಿಂದ—ಒಳ್ಳೇದು, ಅದಾವ ಕೆಲಸವು ಹೇಳಬೇಕು.

ಕೂಡಲೆ ಮುರಾರಿಪಂತನು ಕಿಸೆಯೊಳಗಿನ ವಾರಂಟನ್ನು ತೆಗೆದು ಆನಂದರಾಯನಿಗೆ ತೋರಿಸಿ—ಮೊನ್ನೆ ರಾತ್ರಿ, ಮುಗಭಾಟದೊಳಗಿನ ಗಡಿಯಾರದ ವಠಾರದ ಮೂರನೇ ಅಂತಸ್ತಿನ ಆರನೇ ಕೋಣೆಯಲ್ಲಿ ವಿಠೋಜಿರಾವ ನೋಹಿತೆ ಎಂಬವರ ಕೊಲೆಯಾಗಿರುತ್ತದಷ್ಟೇ? ಅದನ್ನು ನೀವೇ ಮಾಡಿರುವಿರೆಂದು ಪೋಲೀಸರ ಮನವರಿಕೆಯಾಗಲು, ಮ್ಯಾಜಿಸ್ಟ್ರೇಟರು ನಿಮ್ಮನ್ನು ಹಿಡಿಯುವದಕ್ಕಾಗಿ ವಾರಂಟು ಕೊಟ್ಟು ಕಳಿಸಿರುವರು. ನೀವು ಈಗಿಂದೀಗಲೇ ನನ್ನ ಸಂಗಡ ಮ್ಯಾಜಿಸ್ಟ್ರೇಟರ ಕೋರ್ಟಿಗೆ ಹೊರಡಬೇಕು, ಎಂದು ಗಂಭೀರವಾಣಿಯಿಂದ ನುಡಿದನು.

ಈ ಮಾತು ಕಿವಿಗೆ ಬಿದ್ದಕೂಡಲೆ ಆನಂದರಾಯನ ಮುಖಮುದ್ರೆಯು ಥಟ್ಟನೆ ಇಳಿದು ಮೋರೆಯು ಕಪ್ಪಿಟ್ಟಿತು. ಆದರೂ ಅವನು ತನ್ನನ್ನು ನೋಡುವವರಿಗೆ ಧಿಟ್ಟತನವನ್ನು ತೋರಿಸುತ್ತ—"ಇಂಥ ನೀಚಕೃತ್ಯಗಳನ್ನು ಮಾಡುವ ಮನುಷ್ಯನು ನಾನಲ್ಲ, ತಪ್ಪಿ ಎರಡನೆಯವರ ಹೆಸರಿನ ಬದಲು ನನ್ನ ಹೆಸರುಹಾಕಿ, ನೀವು ಈ ವಾರಂಟನ್ನು ತೆಗೆಸಿಕೊಂಡು ಬಂದಿದ್ದೀರಿ, ನೆಟ್ಟಗೆ ವಿಚಾರಮಾಡಿರಿ" ಎಂದು ಅಂದನು.

ಮುರಾ—ಈ ವಿಷಯವಾಗಿ ನಾವು ಸಂಪೂರ್ಣವಾಗಿ ವಿಚಾರಮಾಡಿದ್ದೇವೆ. ಆ ಖೂನು ಮಾಡಿದವರು ನೀವೇ ಎಂದು ನಮ್ಮ ಮನವರಿಕೆ ಆದ ಮೇಲೆ ನಾವು ಈ ವಾರಂಟನ್ನು ತೆಗಿಸಿಕೊಂಡು ಬಂದಿದ್ದೇವೆ. ಒಳ್ಳೇ ಮಾತಿನಿಂದ ನಮ್ಮ ಆಧೀನರಾಗಿರಿ, ಇಲ್ಲದಿದ್ದರೆ ನಿಮಗೆ ಇಲ್ಲಿಂದಿಲ್ಲಿಯೇ ಬೇಡಿಗಳನ್ನು ಹಾಕುವ ಪ್ರಸಂಗವು ಬರುವದು.

ಆನಂದ—( ಸುಳ್ಳು ಅವಸಾನವನ್ನು ತಾಳಿ ನಡುಗುತ್ತ ) —ಹಾಗಾದರೆ ಇದೇನು ಮೊಗಲಾಯಿ ಆಯಿತಲ್ಲ! ! ಪೋಲೀಸರ ಇಂಥ ಸುಳ್ಳು ಬೆದರಿಕೆಗೆ ಬೆದರುವ ಮನುಷ್ಯನು ನಾನಲ್ಲ. ಸುಮ್ಮಸುಮ್ಮನೆ ನನ್ನ ಅಂಗಡಿಯೊಳಗೆ ಬಂದು, ನನಗೆ ಇಲ್ಲದ ಬೆದರಿಕೆಯನ್ನು ತೋರಿಸುತ್ತೀರಿ. ಈ ಬಗ್ಗೆ ನೀವು ಮಾತ್ರ ಮುಂದೆ ಜವಾಬು ಕೊಡಬೇಕಾದೀತು, ಇದನ್ನು ಚೆನ್ನಾಗಿ ಲಕ್ಷದಲ್ಲಿಡಿರಿ.

ಮುರಾರಿ—ಆನಂದರಾವ, ಇನ್ನು ಮೇಲೆ ನೀವು ಆ ಒಣ ಡಾಲಿನ ಮಾತುಗಳನ್ನು ಕಟ್ಟಿಡಿರಿ; ಮೊನ್ನೆ ರಾತ್ರಿ ವಿಶ್ವಾಸರಾಯನು ಮನೆಯಲ್ಲಿಲ್ಲದ

ಸುದ್ದಿಯನ್ನು ಕೇಳಿ, ನೀವು ಅವನ ಮನೆಗೆ ಹೋಗಿ, ಅವನ ಟಾಯಗರ ಎಂಬ ನಾಯಿಯನ್ನು ಸಂಗಡ ಕರಕೊಂಡು ರಾತ್ರಿ ಒಂಬತ್ತು ಗಂಟೆಗೆ ಸುಮಾರಿಗೆ ಮುಗಭಾಟದೊಳಗಿನ ಒಂದು ವಠಾರಕ್ಕೆ ಹೋಗಿದ್ದಿರೆಂದು ಎರಡು ಸಾಕ್ಷಿಗಳು ಇರುವವು. ಇಕೋ, ಈ ಬೂಚು ನೋಡಿರಿ. ಮೊನ್ನೆ ಸಾಯಂಕಾಲಕ್ಕೆ ನೀವು ಈ ಬೂಚನ್ನು ನಿಮ್ಮ ಅಂಗಡಿಯ ಎದುರಿಗಿನ ಡಾ. ಘಾರಪುರೆ, ಇವರ ದವಾಖಾನೆಯೊಳಗಿಂದ ಕೊಂಡುಕೊಂಡಿರುವಿರಿ. ಇದೇ ಬೂಚಿನಲ್ಲಿ ನೀವು ನಿಮ್ಮ ಕಠಾರಿಯ ಮೊನೆಯನ್ನು ಕೂಡ್ರಿಸಿಕೊಂಡು, ವಿಠೋಜಿರಾಯರ ಕಡೆಗೆ ಹೋಗಿ, ಅವರ ಕೊಲೆಯನ್ನು ಮಾಡಿರುವಿರಿ.

ಮುರಾರಿಪಂತನ ಈ ಮಾತುಗಳಿಂದಂತೂ ಕಾರ್ಯವು ಸಫಲವಾಗಿ ಹೋಯಿತು; ಆನಂದರಾಯನು ಈ ಮಾತುಗಳನ್ನು ಕೇಳಿ ಒಮ್ಮೆಲೆ ನೆಲಕ್ಕೆ ಬಿದ್ದು, ಮೋರೆಯಮೇಲೆ ಕೈಯಿಟ್ಟುಕೊಂಡು—ಏನು! ಪೋಲೀಸರು ನನ್ನ ಮೇಲೆ ಇಲ್ಲದ್ದೊಂದು ತಪ್ಪುಹೊರಿಸಿ, ನನ್ನ ವಿರುದ್ಧವಾಗಿ ಇಬ್ಬರು ಸಾಕ್ಷಿದಾರರನ್ನು ಸಹ ಸಿದ್ಧಮಾಡಿದ್ದಾರೆಯೇ, ಎಂದು ಅಂದನು.

ಮುರಾರಿ—ಒಳ್ಳೇದು, ಹೀಗೆ ನೀವು ಮ್ಯಾಜಿಸ್ಟ್ರೇಟ ಸಾಹೇಬರ ಮುಂದೆ ಹೇಳಿರಿ. ಈಗ ನೀವು ಹೇಳಿದ ಮಾತಿನಮೇಲೆ ಅವರ ವಿಶ್ವಾಸವು ಕೂಡುವಂತೆ ಕಾಣುವದಿಲ್ಲ. ಯಾಕಂದರೆ, ಈ ಕೊಲೆಮಾಡುವ ಕೆಲಸದಲ್ಲಿ ನಿಮಗೆ ಸಹಾಯಕಳೂ, ವಿಶ್ವಾಸರಾಯನ ಹೆಂಡತಿಯೂ ಆದ ಕಮಲಾಬಾಯಿಯು ಮ್ಯಾಜಿಸ್ಟ್ರೇಟ ಸಾಹೇಬರಿಗೆಎಲ್ಲ ಸಂಗತಿಗಳನ್ನು ಈ ಮೊದಲೆ ಹೇಳಿಬಿಟ್ಟಿದ್ದಾಳೆ.

ಈ ಎಲ್ಲ ಸಂಗತಿಗಳನ್ನು ಮುರಾರಿಪಂತರು ಸುಳ್ಳು ಸುಳ್ಳೇ ಹೇಳುತಿದ್ದರೆಂಬ ಸಂಗತಿಯನ್ನು ವಾಚಕರಿಗೆ ಹೇಳುವ ಕಾರಣವಿಲ್ಲ. ಸುಳ್ಳು ಮಾತಾಡಿ ನಿಜವಾದ ಸಂಗತಿಗಳನ್ನು ಹೊರಗೆಡವಬೇಕೆಂದು ಅವರು ಈ ಯುಕ್ತಿಯನ್ನು ಮಾಡಿದ್ದರು. ಆ ಪ್ರಕಾರ ಅವರ ಯುಕ್ತಿಯು ಸಫಲವಾಯಿತು. ಯಾಕಂದರೆ, ಬೂಚಿನ ವೃತ್ತಾಂತವನ್ನು ಕೇಳಿ ಗಾಬರಿಯಾದ ಆನಂದರಾಯನು ಎಚ್ಚರಿಕೆಯಿಲ್ಲದೆ— "ಇದಂತೂ ತೀರ ಸುಳ್ಳು, ಅವಳಿಗೆ ಈ ಸಂಬಂಧದಿಂದ ಏನೂ ಗೊತ್ತಿಲ್ಲ" ವೆಂದು ಅಂದನು.

"ಸೈ, ಸೈ, ತಿಳಿಯಿತು; ಈ ಕೆಲಸವು ನಿಮ್ಮದೊಬ್ಬರದೇ ಎಂಬ

ಮಾತಿಗೆ ನೀವು ಒಪ್ಪುತ್ತೀರೆಂದಂತಾಯಿತು.” ಎಂದು ಹೇಳಿ, ಮುರಾರಿಪಂತನು—ಆನಂದರಾವ, ಇನ್ನು ಮೇಲಾದರೂ ನೀವು ಗಿರಗಾಂವ ಪೋಲೀಸ ಚೌಕಿಗೆ ನಡೆಯಿರಿ, ನಿಮ್ಮ ಅಂಗಡಿಯ ಕೀಲೀಕೈ ಸ್ವಲ್ಪ ಇತ್ತಕಡೆಗೆ ಒಗೆಯಿರಿ. ಅಂಗಡಿಯ ಝಡತೀ ಮಾಡಬೇಕಾಗಿದೆ.

ಇನ್ನು ಮೇಲೆ ಅಹುದು, ಇಲ್ಲ, ಅನ್ನುವದರಿಂದ ಏನೂ ಪ್ರಯೋಜನವಾಗುವದಿಲ್ಲೆಂಬದು ಆನಂದರಾಯನಿಗೆ ಖಂಡಿತವಾಗಿ ತಿಳಿದದ್ದರಿಂದ, ಅವನು ಕೀಲೀಕೈಗಳ ಸರವನ್ನು ಮುರಾರಿಪಂತನ ಮುಂದೆ ಒಗೆದನು. ಕೂಡಲೆ ಮುರಾರಿಪಂತನು ಅಂಗಡಿಯ ಒಳಗೆ ಹೊಕ್ಕು, ಅಲ್ಲಿಯ ಒಂದು ಪೆಟ್ಟಿಗೆಯನ್ನು ತೆರೆದು, ಅದರೊಳಗಿಂದ ಒಂದು ಕಠಾರಿಯನ್ನು ಹೊರಗೆ ತೆಗೆದನು. ಅದೇ ಪೆಟ್ಟಿಗೆಯಲ್ಲಿ ಕೆಲವು ಖಾಸಗಿ ಕಾಗದಪತ್ರಗಳು ಇದ್ದವು. ಅವನ್ನೆಲ್ಲತಿರುವಿ ಹಾಕುವಾಗ ಅವುಗಳಲ್ಲಿ ಕೆಲವು, ಕಮಲಾಬಾಯಿಯು ಪ್ರೇಮಪತ್ರಗಳು ಹೊರಟವು. ಆದರೆ ಅವುಗಳಲ್ಲೊಂದರಲ್ಲಿಯೂ ಈ ಖೂನಿನ ವಿಷಯವಾಗಿ ಚಕಾರಶಬ್ದವು ಹೊರಡಲಿಲ್ಲ. ಬಹುಶಃ ಎಲ್ಲ ಪತ್ರಗಳು ವಿಶ್ವಾಸರಾಯನ ನಿಂದೆಯಿಂದಲೂ,ಆನಂದರಾಯನ ಸ್ತುತಿಯಿಂದಲೂ ತುಂಬಿದ್ದವು.

ಈ ಯಾವತ್ತು ಮುದ್ದೆ—ಮಾಲುಗಳನ್ನು ತಕ್ಕೊಂಡು, ಆನಂದರಾಯನನ್ನು ಮುಂದೆಮಾಡಿಕೊಂಡು, ಗಣಪತರಾಯನೂ, ಮುರಾರಿಪಂತರೂ ಅಂಗಡಿಯಿಂದ ಹೊರಬಿದ್ದರು. ಮುರಾರಿಪಂತರು ಒಂದು ಸಾರೆ ಸೀಟಿ ಊದಿದಕೂಡಲೆ ಸಾದಾ ಪೋಷಾಕುಗಳುಳ್ಳ ಇಬ್ಬರು ಗುಪ್ತ ಪೋಲೀಸರು ಅವನ ಹತ್ತರ ಬಂದರು. ಅವನು ಅವರಿಗೆ ಏನೇನೋ ಕಿವಿಮಾತು ಹೇಳಿ ಕಳಿಸಿದನು. ಕೆಲಹೊತ್ತಿನಮೇಲೆ ಅವರಲ್ಲಿ ಒಬ್ಬನು ಒಂದು ಬಾಡಿಗೆಯ ಗಾಡಿಯನ್ನು ತಂದು ನಿಲ್ಲಿಸಿದನು. ಅಷ್ಟರಲ್ಲಿ ಗಣಪತರಾಯನೂ, ಮುರಾರಿಪಂತರೂ ಕೂಡಿ ಅಂಗಡಿಯ ಬಾಗಿಲು ಇಕ್ಕಿ, ಕೀಲೀಹಾಕಿ, ಅದರಮೇಲೆ ಅರಗಿನ ಮುದ್ರೆಯನ್ನು ಮಾಡಿದ್ದರು; ಗಾಡಿಯು ಬಂದಕೂಡಲೆ ಆನಂದರಾಯನನ್ನು ಅದರಲ್ಲಿ ಕೂಡ್ರಿಸಿಕೊಂಡು ಪೋಲೀಸಚೌಕಿಗೆಬಂದರು. ಅಲ್ಲಿ ಆನಂದರಾಯನನ್ನು ಒಂದುಕೋಣೆಯೊಳಗೆ ಹಾಕಿ ಕೀಲೀಹಾಕಿದರು. ಆಗ ಮಾತ್ರ ಅವನು ಎದೆಗುಂದಿ, ಕಣ್ಣೀರುತೆಗೆದು ದುಃಖದಿಂದ ಅಳಹತ್ತಿದನು.

——— ( ೦ ) ———

೧೧ನೆಯ ಪ್ರಕರಣ.

## ದೇವರ ಮನೆಯಲ್ಲಿ ಅನ್ಯಾಯವು ಮುಚ್ಚುವದೇ!



ಮರುದಿವಸ ಆನಂದರಾಯನನ್ನು ಮ್ಯಾಜಿಸ್ಟ್ರೇಟ ಸಾಹೇಬರ ಮುಂದೆ ನಿಲ್ಲಿಸಿದರು. ಆ ಕಾಲಕ್ಕೆ ಅವನು ತನ್ನ ತಪ್ಪು ಒಪ್ಪಿಕೊಂಡನು. ಜವಾಬು ಕೆಳಗೆ ಬರದಂತೆ ಆಯಿತು.

" ಸುಮಾರು ಮೂರು ನಾಲ್ಕು ವರ್ಷಗಳ ಹಿಂದೆ ನನಗೆ ವಿಶ್ವಾಸರಾಯನ ಪರಿಚಯುವಾಯಿತು. ಮುಂದೆ ಸಹವಾಸದಿಂದ ಅತಿ ಪರಿಚಯವಾಗಿ ನಾವಿಬ್ಬರೂ ಸ್ನೇಹಿತರಾದೆವು. ಅವನ ಗೆಳೆತನದಿಂದ ಅವನ ಚಿಗಪ್ಪನ ಪರಿಚಯವು ನನಗಾಯಿತು. ಮುಂದೆ ವಿಶ್ವಾಸರಾಯನೂ, ನಾನೂ ಕೂಡಿ ಪಾಲಿನಿಂದ ವ್ಯಾಪಾರಮಾಡಹತ್ತಿದೆವು. ಒಂದು ವರ್ಷ ವ್ಯಾಪಾರವು ನಡೆಯಿತು. ವಿಶ್ವಾಸರಾಯನನ್ನು ಮೋಸಗೊಳಿಸಿ ಆದ ಲಾಭವನ್ನೆಲ್ಲ ನಾನೊಬ್ಬನೇ ಎತ್ತಿ ಹಾಕಿದೆನು. ತರುವಾಯ, ನಾನೇ ಸ್ವತಂತ್ರ ಅಂಗಡಿಯನ್ನು ತೆಗೆದೆನು. ವಿಶ್ವಾಸರಾಯನ ಹೆಂಡತಿಯ ಮೇಲೆ ಮೊದಲಿನಿಂದಲೇ ನನ್ನ ಕಣ್ಣು ಇತ್ತು. ನಾನೂ ಅವನೂ ಪಾಲಿನಿಂದ ವ್ಯಾಪಾರಮಾಡುವಾಗಲೇ ಅವಳ ನಮ್ಮ ಪ್ರೇಮ ಕೂಡಿತು. ತಮ್ಮ ಮಾವನಹತ್ತರ ದುಡ್ಡು ಬಹಳ ಇರುವದು, ಅವನ ಪಶ್ಚಾತ್ ಆ ದುಡ್ಡೆಲ್ಲ ತನ್ನ ಗಂಡನಿಗೆ ಸಿಗತಕ್ಕದ್ದಿರುವದು; ಆದಕಾರಣ ಆ ಮುದುಕನನ್ನು ಈ ಜಗತ್ತಿನೊಳಗಿಂದ ಇಲ್ಲದಂತೆ ಮಾಡಿದರೆ, ಈಗಲೆ ಆ ದುಡ್ಡು ನನ್ನ ಗಂಡನ ಆಧೀನಕ್ಕೆ, ಅರ್ಥಾತ್ ನನ್ನ ಆಧೀನಕ್ಕೆ ಬರುವದು. ಆ ಬಳಿಕ ನಾವಿಬ್ಬರೂ ಯಥೇಚ್ಛವಾಗಿ ಆ ದುಡ್ಡಿನ ಉಪಭೋಗವನ್ನು ತೆಗೆದುಕೊಳ್ಳೋಣ, ಎಂದು ಕಮಲಾಬಾಯಿಯು ನನಗೆ ಆಲೋಚನೆಯನ್ನು ಹೇಳಿದಳು. ಹೊನ್ನು—ಹೆಣ್ಣುಗಳ ಮೋಹಕ್ಕೆ ಒಳಗಾಗಿ ನಾನಾದರೂ ಅವಳ ಆಲೋಚನೆಗೆ ಒಡಂಬಟ್ಟೆನು. ನಾನು ಈಗ ಎಷ್ಟೋ ದಿನಗಳಿಂದ ಆ ಮುದುಕನನ್ನು ಕೊಲ್ಲಲಿಕ್ಕೆ ಹೊಂಚು ಹಾಕಿದ್ದೆನು. ಮೊನ್ನೆ ರಾತ್ರಿ ವಿಶ್ವಾಸರಾಯನಿಗೆ ಭೆಟ್ಟಿಯಾಗಬೇಕೆಂದು ಅವನ ಅಂಗಡಿಗೆ ಹೋದೆನು. ಅಲ್ಲಿ ಅವನ ಹೆಂಡತಿಯೊಬ್ಬಳೇ ಇದ್ದಳು. ಊಟವಾದ ಕೂಡಲೇ ವಿಶ್ವಾಸರಾಯನು ಮಾರ್ಕೇಟಿನ

ಕಡೆಗೆ ಅಡ್ಡಾಡುತ್ತ ಹೋಗಿರುವನೆಂದು ಅವಳೇ ನನಗೆ ಹೇಳಿದಳು. ಟಾಯು ಗರ ನಾಯಿಯು ಕಟ್ಟೆಯಮೇಲೆ ಮಲಗಿತ್ತು. ನನಗೆ ಆ ನಾಯಿಯು ಒಳ್ಳೇ ಈಲಾದ್ದರಿಂದ ನಾನು ಅದನ್ನು ಸಂಗಡ ಕರಕೊಂಡು, ತಿರುಗಿ ನಮ್ಮ ಮನೆಗೆ ಬಂದು ವಿಶ್ವಾಸರಾಯನಂತೆಯೇ ಪೋಷಾಕು ಮಾಡಿಕೊಂಡು ಹತ್ತು ಗಂಟೆಯ ಸುಮಾರಿಗೆ ಮುಗಭಾಟದೊಳಗಿನ ವಠಾರಕ್ಕೆ ಹೋದೆನು. ವಿಠೋಜಿ ರಾಯರು ತಮ್ಮ ಕೋಣೆಯಲ್ಲಿ ಹಾಸಿಗೆಯಮೇಲೆ ಬಿದ್ದುಕೊಂಡು “ಇಂದು ಪ್ರಕಾಶ,” ವರ್ತಮಾನಪತ್ರವನ್ನು ಓದುತ್ತಿದ್ದರು. ನಾನು ಅವರ ಕೋಣೆ ಯೊಳಗೆ ಹೋದಕೂಡಲೆ ಅವರು ವರ್ತಮಾನ ಪತ್ರವನ್ನು ಬದಿಗಿಟ್ಟು ನನ್ನ ಕೂಡ ಮಾತಾಡಹತ್ತಿದರು. ಆ ಸುದ್ದಿ, ಈ ಸುದ್ದಿ ಮಾತಾಡುತ್ತ ಮಾತಾ ಡುತ್ತ ಹನ್ನೆರಡು ಗಂಟೆ ರಾತ್ರಿಯಾಯಿತು. ಆ ವಠಾರದಲ್ಲಿ ನಾಲ್ಕೂಕಡೆಗೆ ಶಾಂತತೆಯ ಸಾಮ್ರಾಜ್ಯವು ಹಬ್ಬಿದ್ದನ್ನು ಕಂಡು, ನಾನು ಮನೆಗೆ ಹೋಗುವ ದಕ್ಕಾಗಿ ಎದ್ದೆನು. ವಿಠೋಜಿರಾಯರೂ ಕದ ಇಕ್ಕುವದಕ್ಕಾಗಿ ಎದ್ದರು ಕೂಡಲೆ ಅವರನ್ನು ನಾನು ಏಳಗೊಡದೆ, ಸಂಗಡ ಒಯ್ದಿದ್ದ ಕಠಾರಿಯನ್ನು ಒಮ್ಮೆಲೆ ಅವರ ಎದೆಗೆ ಚುಚ್ಚಿದೆನು. ತತ್ಕಾಲಕ್ಕೆ ಆ ಮುದುಕನ ಪ್ರಾಣವು ಹೋಯಿತು. ನಮ್ಮಿಬ್ಬರ ಆಲೋಚನೆಯ ಪ್ರಕಾರ ಒಂದು ಖೂನಂತೂ ಆಯಿತು. ನನ್ನ ಮನಸ್ಸಿನಲ್ಲಿ ವಿಶ್ವಾಸರಾಯನಿಗೂ ಯಮಪುರಿಯ ಮಾರ್ಗ ವನ್ನು ತೋರಿಸುವದಿತ್ತು. ಇದಕ್ಕಾಗಿ ನಾನು ಮುದುಕನ ಎದೆಯೊಳಗಿಂದ ಹರಿಯುವ ರಕ್ತದೊಳಗೆ ಅವನದೊಂದು ಕೈಬೆರಳನ್ನು ಮುಣುಗಿಸಿ, ಅದ ರಿಂದ ಅವನ ತಲೆಗಿಂಬಿನ ಮಗ್ಗಲಿಗೆ ವಿಶ್ವಾಸರಾಯನ ಹೆಸರಿನ ಮೊದಲಿನ ಮೂರು ಅಕ್ಷರಗಳನ್ನು ಬರೆದೆನು. ಈ ಯುಕ್ತಿಯಿಂದ ಅಪರಾಧವು ವಿಶ್ವಾ ಸರಾಯನ ಮೇಲೆ ಹೊರುವದೆಂದು ನಾನು ತಿಳಕೊಂಡೆನು. ನಾನು ವಿಶ್ವಾಸ ರಾಯನಂತೆ ಪೋಷಾಕು ಮಾಡಿದ್ದರಿಂದಲೂ, ಅವನ ನಾಯಿಯು ನನ್ನ ಸಂಗಡ ಇದ್ದದ್ದರಿಂದಲೂ, ದಾರಿಯಲ್ಲಿ ವಠಾರದಕಾವಲುಗಾರನಾದ ಭಯ್ಯಾನೂ ತನ್ನ ಕೆಲಸ ತೀರಿಸಿ ಮನೆಗೆ ನಡೆದಿದ್ದ ವಿಠೋಜಿರಾಯರ ಅಡಿಗೆಯವನೂ ನನ್ನನ್ನು ವಿಶ್ವಾಸರಾಯನೇ ಎಂದು ತಿಳಕೊಂಡರು. ಈ ಪ್ರಕಾರ ಕಕ್ಕನ ಸಂಗಡ ಮಗನೂ ಈ ಜಗತ್ತಿನೊಳಗಿಂದ ಇಲ್ಲದಂತೆ ಆಗುವ ಯೋಚನೆಯನ್ನು ಮಾಡಿ, ಅಲ್ಲಿಂದ ವಿಶ್ವಾಸರಾಯನ ಅಂಗಡಿಗೆ ಬಂದು, ನಾಯಿಯನ್ನು ಅಲ್ಲಿ

ಬಿಟ್ಟು, ನಮ್ಮ ಮನೆಗೆ ಹೋಗಿ ಸ್ವಸ್ಥವಾಗಿ ಮಲಗಿಕೊಂಡೆನು. ಮರುದಿವಸ ಕ್ರಮದ ಪ್ರಕಾರ ಪೋಲೀಸರ ವಿಚಾರಣೆಯು ಪ್ರಾರಂಭವಾಯಿತು. ನಾನು ಮೊದಲೇ ಅನುಮಾನ ಮಾಡಿದಂತೆ ಅಪರಾಧವು ವಿಶ್ವಾಸರಾಯನ ಮೇಲೆ ಹೊತ್ತಿತು. ಮತ್ತು ಅದೇ ದಿವಸ ಅವನನ್ನು ಹಿಡಕೊಂಡು ಹೋದರೆಂಬ ಸುದ್ದಿಯನ್ನು ಕೇಳಿ, ನನ್ನ ಇಷ್ಟಾರ್ಥವು ಈಡೇರಿತೆಂದು ಮನಸ್ಸಿನಲ್ಲಿಯೇ ಸಂತೋಷಪಡುತ್ತಿದ್ದೆನು. ವಿಠೋಜಿರಾಯರ ಸಂಪತ್ತೂ, ವಿಶ್ವಾಸರಾಯನ ಹೆಂಡತಿಯೂ ಇನ್ನು ಮೇಲೆ ನನ್ನ ಆಧೀನವೇ ಎಂದು ನನಗೆ ಅನಿಸಹತ್ತಿತು. ಆದರೆ ಈ ವಿಚಾರಗಳೆಲ್ಲ ಕನಸಿನಂತೆ ಆದವು. ದೇವರ ಮನೆಯಲ್ಲಿ ಅನ್ಯಾಯವು ಮುಚ್ಚುವದೇ? ನಾನು ಎಲ್ಲ ಕೆಲಸಗಳನ್ನು ಎಷ್ಟು ಎಚ್ಚರದಿಂದ ಮಾಡಿದ್ದರೂ ಕಟ್ಟಕಡೆಗೆ ಸರಕಾರದವರ ಕೈಗೆ ಸಿಕ್ಕೆನು.

"ಆನಂದರಾಯರೇ, ನೀವು ತೆಗೆದ ಯುಕ್ತಿಯು ಮಾತ್ರ ಅಮೂಲ್ಯವಾದದ್ದು. ಆದರೆ ಕಟ್ಟಕಡೆಗೆ ಒಂದು ದೊಡ್ಡ ತಪ್ಪು ಮಾಡಿದಿರಿ, ಆ ತಪ್ಪು ಇನ್ನೂ ನಿಮ್ಮ ಲಕ್ಷಕ್ಕೆ ಬಂದಂತೆ ಕಾಣಲಿಲ್ಲ. ಮುದುಕನನ್ನು ಕೊಂದಮೇಲೆ ಅವಸರದಿಂದ 'ವಿಶ್ವಾಸ, ಈ ಅಕ್ಷರಗಳನು ಆವನ ಎಡಗೈ ಬೆರಳಿನಿಂದ ಬರೆಸಿರುವಿರಿ. ಇಲ್ಲಿ ನಿಮ್ಮ ತಪ್ಪಾಯಿತು!! ಎಂದು ಮುರಾರಿಪಂತನು ಅಂದನು.

"ಈ ಸಂಶಯದಿಂದಲೇ ನೀವು ಖೂನು ಮಾಡಿದ ಮನುಷ್ಯನನ್ನು ಶೋಧಿಸುತ್ತ ನನ್ನ ತನಕ ಬಂದಿರೇನು?" ಎಂದು ಆನಂದರಾಯನು ಅಂಜುತ್ತಂಜುತ್ತ ಪ್ರಶ್ನೆ ಮಾಡಿದನು.

"ಅಹುದು, ಎಂದು ಮುರಾರಿಪಂತನು ಹೇಳಿದನು.

ಈ ಮಾತು ಕೇಳಿ ಆನಂದರಾಯನ ಮುಖಮುದ್ರೆಯು ವಿಲಕ್ಷಣತರದ್ದಾಯಿತು. ಅವನು ಒಂದು ನಿಟ್ಟುಸುರು ಬಿಟ್ಟು—ಅಯ್ಯೋ ದೈವವೇ! ಒಳ್ಳೇ ಎಚ್ಚರಿಕೆಯಿಂದ ಲಕ್ಷಪೂರ್ವಕವಾಗಿ ಮಾಡಿದ ಕೆಲಸವು ವ್ಯೈಮೇಲೆ ಬರಬೇಕೇ? ರಾಯರೇ, ನಾನು ಆ ಮುದುಕನ ಎಡಗೈಯಿಂದ ಬರೆಯಿಸಿದ್ದು ತಪ್ಪಲ್ಲ. ಯಾಕಂದರೆ ಆ ಮುದುಕನು ರೊಡ್ಡಗೈಯವನಾಗಿದ್ದನು. ಇದನ್ನು ತಿಳಿದೇ ನಾನು ಹಾಗೆ ಮಾಡಿದ್ದೆನು. ಸಾರಾಂಶ, ದುಷ್ಕೃತ್ಯಗಳು ಎಂದೂ ಮುಚ್ಚುವದಿಲ್ಲೆಂಬ ಮಾತು ಸುಳ್ಳಲ್ಲ; ಖೂನುಗಳು ಒಳ್ಳೆ

ವಿಲಕ್ಷಣ ರೀತಿಯಿಂದ ಬೈಲಿಗೆ ಬರುವವೆಂದು ಹೇಳುತ್ತಿರುತ್ತಾರೆ. ಆ ಮಾತು ಈ ಉದಾಹರಣೆಯಿಂದ ಅಕ್ಷರಶಃ ನಿಜವಾಯಿತು.

ಆನಂದರಾಯನ ಹೇಳಿಕೆಯ ಪ್ರಕಾರ ಮೋಹಿತೆ ವಿಠೋಜಿರಾಯರು ರೊಡ್ಡಗೈಯವರಾಗಿದ್ದರೆಂಬದು ಮುರಾರಿಪಂತರಿಗೆ ಹಿಂದಿನಿಂದ ಗೊತ್ತಾಯಿತು. ಈ ಸಂಗತಿಯು ಪ್ರಾರಂಭದಿಂದ ಯಾರಲಕ್ಷದಲ್ಲಿಯೂ ಬಾರದಿದ್ದದ್ದು ಆಶ್ಚರ್ಯವು. ಮುರಾರಿಪಂತರಂತೂ ತಮ್ಮಷ್ಟಕ್ಕೆತಾವೇ ಬಹಳ ಬೈದುಕೊಂಡರು. ಆ ಕಾಲಕ್ಕೆ ಈ ಮಾತು ಯಾರ ಲಕ್ಷದಲ್ಲಿಯೂ ಬಾರದ್ದರಿಂದಲೇ ಖೂನು ಮಾಡಿದ ಮನುಷ್ಯನ ಶೋಧವಾಯಿತು. ಎಂದು ಎಲ್ಲರೂ ತಮ್ಮ ತಮ್ಮ ಮನಸಿಗೆ ಸಮಾಧಾನವನ್ನು ಹಚ್ಚಿಕೊಂಡರು. ಮನುಷ್ಯನಿಂದ ಆದ ತಪ್ಪುಗಳೇ ಮುಂದೆ ಒಮ್ಮೊಮ್ಮೆ ಅವನಿಗೆ ಲಾಭದಾಯಕವಾಗುತ್ತವೆಂಬದಕ್ಕೆ ಈ ಉದಾಹರಣೆಯು ತಕ್ಕದ್ದಾಗಿದೆ.

ಇಷ್ಟಾದ ಬಳಿಕ ಅದೇ ದಿವಸ ವಿಶ್ವಾಸರಾಯನು ಬಿಡುಗಡೆ ಹೊಂದಿದನು. ಆ ಕಾಲಕ್ಕೆ ಮ್ಯಾಜಿಸ್ಟ್ರೇಟ ಸಾಹೇಬರು ಅವನಿಗೆ ಚೆನ್ನಾಗಿ ಉಪದೇಶ ಮಾಡಿದರು. ಕಟ್ಟಕಡೆಗೆ ಅವರು ಅವನಿಗೆ ಹೇಳಿದ್ದೇನಂದರೆ-

"ವಿಶ್ವಾಸರಾಯರೇ, ನೀವು ಈ ಪೊತ್ತು, ಸರಕಾರದವರಿಂದ ಒಬ್ಬ ನಿರಪರಾಧಿಯಾದ ಮನುಷ್ಯನಿಗೆ ದೇಹಾಂತ ಶಿಕ್ಷೆಯನ್ನು ಕೊಡಿಸುತ್ತಿದ್ದಿರಿ. ಇದಕ್ಕಾಗಿ ನಿಮ್ಮ ಮೇಲೆ ತಿರುಗಿ ಖಟ್ಲೆಯನ್ನೇ ಮಾಡತಕ್ಕದ್ದು, ಆದರೆ ನನಗೆ ಆ ಇಚ್ಛೆಯು ಇಲ್ಲ; ಇನ್ನು ಮುಂದೆಯಾದರೂ ನೀವು ಒಳ್ಳೇ ರೀತಿಯಿಂದ ನಡೆಯಿರಿ."

ಅದಕ್ಕೆ ವಿಶ್ವಾಸರಾಯನು—ನನ್ನ ಹೆಂಡತಿಯ ಮೇಲೆ ನನ್ನ ಪ್ರೇಮವು ವಿಶೇಷವಾಗಿರುವದು. ಅವಳೇ ಈ ಕೊಲೆಯನ್ನು ಮಾಡಿಸಿರಬಹುದೆಂದು ನನ್ನ ಗ್ರಹಿಕೆಯಾಯಿತು; ಆದ ಕಾರಣ ಅವಳ ಪ್ರಾಣವನ್ನು ಉಳಿಸಿ ನಾನು ಸಾಯಲಿಕ್ಕೆ ಸಿದ್ಧನಾದೆನು, ಎಂದು ಹೇಳಿದನು.

ವಿಶ್ವಾಸರಾಯನ ಭಾಷಣದಿಂದ ತನ್ನ ಹೆಂಡತಿಯೇ ಈ ಖೂನು ಮಾಡಿಸಿರಬೇಕೆಂದು ಅವನು ತಿಳಕೊಳ್ಳಲಿಕ್ಕೆ ಏನಾದರೂ ಬಲವತ್ತರ ಕಾರಣವಿರಬೇಕೆಂದು ಮುರಾರಿಪಂತನೂ, ಗಣಪತರಾಯನೂ ಕೂಡಿಯೇ

ತರ್ಕಿಸಿದರು. ಮನುಷ್ಯನ ಮುಖಮುದ್ರೆಯ ಮೇಲಿಂದ ಅವನ ಅಂತರಂಗವನ್ನು ಗೊತ್ತು ಹಚ್ಚುವದರಲ್ಲಿ ಕುಶಲನಾದ ಮುರಾರಿಪಂತನು—"ವಿಶ್ವಾಸರಾಯನು ದುರ್ಬಲಮನಸ್ಸಿನ ಮನುಷ್ಯನಾಗಿರುವನು; ಅವನ ಹೆಂಡತಿಯು ದುಷ್ಟಳೂ, ಧೂರ್ತಳೂ ಆಗಿರುವಳು; ತನ್ನ ಗಂಡನು ತಾನು ಹೇಳಿದಂತೆ ಕೇಳುತ್ತಿರುವದನ್ನೂ, ವಿಠೋಜಿಯು ತನ್ನ ಕೂಡ ದ್ವೇಷಮಾಡುತ್ತಿರುವದನ್ನೂ ತಿಳಕೊಂಡು, ಅವಳು ವಿಶ್ವಾಸರಾಯನಿಗೆ ಯಾವರೀತಿಯಿಂದಾದರೂ ವಿಠೋಜಿರಾಯರ ಕೊಲೆ ಮಾಡುವ ಆಲೋಚನೆಯನ್ನು ಹೇಳಿದಳು. ಆದರೆ ಹೆಂಡತಿಯು ಉಗುಳು ಹಾಕಿದರೆ ವಿಶ್ವಾಸರಾಯನು ದಾಟದಂಥ ಸ್ವಭಾವದವನಾದಾಗ್ಯೂ, ಪಾಪಕ್ಕೆ ಅಂಜಿ ನಡೆಯುವವನಾಗಿದ್ದರಿಂದ ಹೆಂಡತಿಯ ಈ ಆಲೋಚನೆಗೆ ಅವನು ಒಪ್ಪಿಕೊಳ್ಳಲಿಲ್ಲ. ಅದರಿಂದ ಆವಳು ಮನಸ್ಸಿನಲ್ಲಿಯೇ ಗಂಡನ ಕೂಡ ದ್ವೇಷ ಮಾಡಹತ್ತಿದಳು; ಮತ್ತು ಕೇವಲ ತನ್ನ ಮನಸ್ಸಿನೊಳಗಿನ ಉದ್ದೇಶವನ್ನು ಈಡೇರಿಸುವದಕ್ಕಾಗಿ, ಅವಳು ಆನಂದರಾಯನ ಇಚ್ಛೆಗೆ ತನ್ನ ಪಾತಿವ್ರತ್ಯವನ್ನು ಬಲಿಯಾಗಿ ಅರ್ಪಿಸಿದಳು. ಆನಂದರಾಯನಾದರೂ ಹೊನ್ನು-ಹೆಣ್ಣುಗಳೆರಡು ಲಭಿಸುವವೆಂದು ತಿಳಿದು, ಅವಳ ಮಾತಿಗೆ ಒಡಂಬಟ್ಟು, ಪ್ರಸಂಗಸಾಧಿಸಿ ವಿಠೋಜಿರಾಯನ ಕೊಲೆ ಮಾಡಿದನು. ಇಷ್ಟೇ ಅಲ್ಲ, ಈ ಅಪರಾಧವು ವಿಶ್ವಾಸರಾಯನ ಮೇಲೆ ಹೊರುವಂತೆ ಯುಕ್ತಿಯನ್ನು ಮಾಡಿ, ಅವನನ್ನೂ ಈ ಜಗತ್ತಿನೊಳಗಿಂದ ಇಲ್ಲದಂತೆ ಮಾಡುವ ಯೋಚನೆಯನ್ನು ಮಾಡಿದ್ದನು. ಅವನ ಆಲೋಚನೆಯ ಪ್ರಕಾರ ಎಲ್ಲ ಸಂಗತಿಗಳೂ ಸಂಭವಿಸಿದವು; ಆದರೆ ಆ ಮುದುಕನು ರೊಡ್ಡಿಗೈಯವನಿದ್ದನೆಂಬ ನಿಜವಾದ ಸಂಗತಿಯೇ ಅವನಿಗೆ ಮುಳುವಾಗಿ, ಅವನು ಮಾಡಿಟ್ಟ ಕುಯುಕ್ತಿಗಳೆಲ್ಲ ಅವನ ಮೇಲೆಯೇ ತಿರುಗಿದವು. ಎಂದು ಗಣಪತರಾಯನಿಗೆ ಹೇಳಿದನು. ಅವನು ಮುರಾರಿಪಂತನ ಈ ಸಯುಕ್ತಿಕವಾದ ಕಲ್ಪನೆಗಳಿಗೆ ಅವನನ್ನು ಅತಿಶಯವಾಗಿ ಹೊಗಳಿದನು. ಕಡೆಗೆ ಕೊಲೆಗೆ ಮೂಲಕಾರಣಳಾದ ಕಮಲಾಬಾಯಿಯನ್ನು ಅರೋಪಿಯೆಂದು ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಲಿಲ್ಲ; ಮತ್ತು ಈ ಕೊಲೆಯ ಆಲೋಚನೆಯಲ್ಲಿ ಅವಳ ಅಂಗವಿರುವದೆಂಬ ಸಂಗತಿಯನ್ನು ವಿಶ್ವಾಸರಾಯನಿಗೂ ತಿಳಿಯಗೊಡಲಿಲ್ಲ-

ಆದರಿಂದ ವಿಠೋಜಿರಾಯನ ಪಶ್ಚಾತ್, ಅವನ ಎಲ್ಲ ಸಂಪತ್ತಿಗೆ ವಿಶ್ವಾಸರಾಯನೂ, ಅವನ ಹೆಂಡತಿಯಾದ ಕಮಲಾಬಾಯಿಯೂ ಒಡೆಯರಾದರು.

ಆನಂದರಾಯನ ಈ ಖಟ್ಲೆಯನ್ನು ಮ್ಯಾಜಿಸ್ಟ್ರೇಟರು ಸೆಶನ್ ಕಮಿಟ ಮಾಡಿದರು; ಅಲ್ಲಿ ಅವನಿಗೆ ದೇಹಾಂತ ಶಿಕ್ಷೆಯು ಕೊಡಲ್ಪಟ್ಟಿತು. ಪರಸ್ತ್ರೀ, ಪರದ್ರವ್ಯಗಳನ್ನು ಅಪಹರಿಸಬೇಕೆನ್ನುವ ನೀಚರಿಗೆ ದೇವರು ಹೀಗೆ ಶಾಸನವನ್ನು ಮಾಡುತ್ತಾನೆ.

ಇಷ್ಟಾದ ಒಳಿಕ ವಿಶ್ವಾಸರಾಯನು ಮುಂಬಯಿಯೊಳಗಿನ ಮೋತೀಬಜಾರದಲ್ಲಿ ಮುತ್ತುರತ್ನಗಳ ಒಂದು ಅಂಗಡಿಯನ್ನು ಹಾಕಿ ವ್ಯಾಪಾರ ಮಾಡಹತ್ತಿದನು. ಅವನ ವ್ಯಾಪಾರವು ಚೆನ್ನಾಗಿ ನಡೆಯಹತ್ತಿತು. ಅದರಿಂದ ಅವನು ಬಹಳ ಹಣವನ್ನು ಗಳಿಸಿದನು. ಮುಂಬಯಿಯೊಳಗಿನ ಎಲ್ಲ ವ್ಯಾಪಾರಸ್ಥರಲ್ಲಿ ಅವನ ವರ್ಚಸ್ಸು ಬೆಳೆಯಿತು; ಆದರೆ ಕಮಲಾಬಾಯಿಯ ಮೇಲೆ ಮಾತ್ರ ಅವನ ಪ್ರೇಮವು ಮೊದಲಿನಂತೆ ಇದ್ದಿಲ್ಲ. ಅವಳ ವಿಷಯವಾಗಿ ಅವನು ಯಾವಾಗಲು ಉದಾಸೀನನಾಗಿ ಇರುತ್ತಿದ್ದನು.

ಈ ಮೇರೆಗೆ ಗಣಪತರಾಯನಿಗೆ ಮುರಾರಿಪಂತನ ಸ್ನೇಹದಿಂದ ಪೋಲೀಸಖಾತೆಯೊಳಗಿನ ಎಷ್ಟೋ ಸಣ್ಣ ಪುಟ್ಟ ಸಂಗತಿಗಳು ತಿಳಿದವು. ಅವರಿಬ್ಬರೂ ಒಳ್ಳೇ ಪ್ರೀತಿಯ ಗೆಳೆಯರಾಗಿದ್ದರು. ಮುರಾರಿಪಂತನು ಮುಂಬಯಿಯಲ್ಲಿ ಇರುವತನಕ ಎಷ್ಟೋ ಗುಹ್ನೆಗಳನ್ನು ಶೋಧಿಸುವ ಕೆಲಸದಲ್ಲಿ ಅವನಿಗೆ ಗಣಪತರಾಯನಿಂದ ಬಹಳ ಸಾಹಾಯ್ಯವಾಗುತ್ತಿತ್ತು; ಎಷ್ಟೋ ಪ್ರಸಂಗಗಳಲ್ಲಿ ಮುರಾರಿಪಂತನು, ಗಣಪತರಾಯನನ್ನು ಕುರಿತು—"ನೀವು ವೈದ್ಯಕಿಯ ಉದ್ಯೋಗದಲ್ಲಿ ಸೇರದಿದ್ದರೆ, ನಾನು ಗುಪ್ತಪೋಲೀಸಖಾತೆಯೊಳಗೆ ಸೇರಲಿಕ್ಕೆ ಆಗ್ರಹಮಾಡುತ್ತಿದ್ದೆನು" ಎಂದು ಅನ್ನುತ್ತಿದ್ದನು.

---

ಮುರಾರಿರಾವ ಈ ಪುಸ್ತಕವು

ಕನ್ನಡ ಪ್ರಾಥಮಿಕ ಶಾಲೆಗಳ ಇನಾಮಿನ ಸಲುವಾಗಿ

ವ್ಹರ್ನಾಕ್ಯೂಲರ ಬುಕ್ ಕಮಿಟಿಯವರಿಂದ

ಮಂಜೂರ ಮಾಡಲ್ಪಟ್ಟಿರುವದು.

$$\text{ನಂ. } \frac{56 \text{ p}}{5741}$$

11-8-1924

# ಗಳಗನಾಥರವರ ಪುಸ್ತಕಗಳ ಪಟ್ಟಿಯು.

.... ಈ ಚಿಹ್ನ ಮಾಡಿದ ಪುಸ್ತಕಗಳು ತೀರಿರುತ್ತವೆ.

## ಪೌರಾಣಿಕ ಗ್ರಂಥಗಳು

| | ರೂ. ಆ. |
|---|---|
| ೧ ಸಚಿತ್ರ ಹಾಗು ಸರಹಸ್ಯ ಮಹಾ ಭಾರತಾಮೃತ (ಆದಿಪರ್ವ) | ೩–೮ |
| ೨ ಭಾಗವತಾಮೃತ. | ೧–೮ |
| ೩ ಶೈವಸುಧಾರ್ಣವ. | ೩–೮ |
| ೪ ತುಲಸೀರಾಮಾಯಣ. | ೩–೦ |
| ೫ ಶ್ರೀ ವೇಂಕಟೇಶಮಾಹಾತ್ಮ್ಯ. | ೧–೦ |
| ೬ ಭಗವತೀಕಾತ್ಯಾಯನಿ. | ೦–೮ |

## ಕನ್ನಡಿಗರ ಕಾದಂಬರಿಗಳು.

| | |
|---|---|
| ೭ ಮಾಧವಕರುಣಾವಿಲಾಸ. | ೩–೧೨ |
| ೮ ಕರ್ಮಕಥೆ. | ೧–೮ |
| .೯ ಕುಮುದಿನಿ. | ೧–೦ |

## ಮರಾಟರ ಕಾದಂಬರಿಗಳು.

| | |
|---|---|
| ೧೦ ಈಶ್ವರೀಸೂತ್ರ | ೧–೦ |
| ೧೧ ಕಮಲಕುಮಾರಿ. | ೧–೦ |
| ೧೨ ಮರಾಟರ ಅಭ್ಯುದಯ. | ೧–೦ |
| ೧೩ ಛತ್ರಪತಿ. | ೧–೦ |
| ೧೪ ಗೃಹಕಲಹ. | ೧–೦ |
| ೧೫ ಶಿವಪ್ರಭುವಿನ ಪುಣ್ಯ. | ೧–೦ |
| ೧೬ ಕುರುಕ್ಷೇತ್ರ. | ೧–೦ |

## ರಜಪೂತರ ಕಾದಂಬರಿಗಳು.

| | ರೂ. ಆ. |
|---|---|
| ...೧೭ ರಾಣೀಮೃಣಾಲಿನಿ. | ೧–೮ |
| ೧೮ ಧಾರ್ಮಿಕತೇಜ. | ೧–೮ |
| ೧೯ ಧರ್ಮರಹಸ್ಯ. | ೧–೦ |
| ...೨೦ ಸತ್ವಸಾರ. | ೧–೦ |
| ...೨೧ ಕ್ಷಾತ್ರತೇಜ. | ೧–೦ |
| ೨೨ ತಿಲೋತ್ತಮೆ. | ೧–೦ |
| ...೨೩ ರಾಣಾರಾಜಸಿಂಹ. | ೦–೧೨ |

## ಕಾಲ್ಪನಿಕ ಕಾದಂಬರಿಗಳು.

| | |
|---|---|
| ೨೪ ಪ್ರಬುದ್ಧ-ಪದ್ಮನಯನೆ. | ೧–೦ |
| ...೨೫ ಲಕ್ಷ್ಮೀಬಾಯಿ. | ೧–೦ |
| ೨೬ ಗುರುಪ್ರಸಾದ. | ೦–೧೨ |

## ಚರಿತ್ರಗಳು.

| | |
|---|---|
| ...೨೭ ಶ್ರೀ ಚಿದಂಬರಚರಿತ್ರ. | ೧–೦ |
| ೨೮ ನಿರ್ಯಾಣಮಹೋತ್ಸವ. | ೦–೮ |

## ಪ್ರಬಂಧಗಳು.

| | |
|---|---|
| ...೨೯ ದಾಂಪತ್ಯ. | ೦–೮ |
| ...೩೦ ಕುಟುಂಬ. | ೦–೯ |
| ...೩೧ ಮನಸ್ಸು. | ೦–೪ |
| ೩೨ ಸದ್ಗುರುಪ್ರಭಾವ. | ೦–೧೨ |

# ಇದೀಗ ತಯಾರಾದ ಹೊಸಪುಸ್ತಕಗಳು.

| | |
|---|---|
| ೧ ಕಮಲಕುಮಾರಿ | ೧–೦ |
| ೨ ಧರ್ಮರಹಸ್ಯ | ೧–೦ |
| ೩ ವಿಕಾರವಿನಾಶ | ೦–೧೦ |
| ೪ ಪ್ರಬುದ್ಧ ಪದ್ಮನಯನೆ | ೧–೦ |
| ೫ ಸಭಾಪರ್ವದ ರಹಸ್ಯಗಳು | ೦–೧೦ |
| ೬ ಮಹಾಭಾರತಾಮೃತದ ೨ನೇಪುಸ್ತಕ (ಸಭಾಪರ್ವಪೂರ್ಣ ವನಪರ್ವಅರ್ಧ) | ೩–೦ |